


ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# ಪು.ತಿ.ನ ಪ್ರಬಂಧಗಳಲ್ಲಿ ಶ್ರೀವೈಷ್ಣವ ತತ್ತ್ವ

ಸಂಶೋಧನ ವಿದ್ಯಾರ್ಥಿ

ಎ.ಎನ್.ಭಾಗ್ಯ

ಮಾರ್ಗದರ್ಶಕರು

ಡಾ. ಕೆ.ಆರ್. ಗಣೇಶ



ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

424




ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# ಪು.ತಿ.ನ ಪ್ರಬಂಧಗಳಲ್ಲಿ ಶ್ರೀವೈಷ್ಣವ ತತ್ತ್ವ

ಸಂಶೋಧನ ವಿದ್ಯಾರ್ಥಿ
ಎ.ಎನ್.ಭಾಗ್ಯ

ಮಾರ್ಗದರ್ಶಕರು
ಡಾ. ಕೆ.ಆರ್. ಗಣೇಶ






ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಪು.ತಿ.ನ ಪ್ರಬಂಧಗಳಲ್ಲಿ ಶ್ರೀವೈಷ್ಣವ ತತ್ತ್ವ"** ಎಂಬ ಸಂಪ್ರಬಂಧವನ್ನು ಎ.ಎನ್.ಭಾಗ್ಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 07.11.2008
ಸ್ಥಳ: ಬೆಂಗಳೂರು

ಸಹಿ:

**(ಡಾ. ಕೆ.ಆರ್.ಗಣೇಶ)**

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಪು.ತಿ.ನ ಪ್ರಬಂಧಗಳಲ್ಲಿ ಶ್ರೀವೈಷ್ಣವ ತತ್ತ್ವ"** ಎಂಬ ಸಂಪ್ರಬಂಧವನ್ನು ಡಾ.ಕೆ.ಆರ್.ಗಣೇಶ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 07.11.2008
ಸ್ಥಳ: ಬೆಂಗಳೂರು

ಸಹಿ:

Bhagya-A-N.
(ಎ.ಎನ್.ಭಾಗ್ಯ)

# ಮುಗ್ಧತೆಯ ಸೌಜನ್ಯದ ಸಂಕೇತ



# ಪರಿವಿಡಿ

# ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿ

ಹೊಸಗನ್ನಡ ಸಾಹಿತ್ಯದ ಅರುಣೋದಯಕ್ಕೆ ಕಾರಣರಾದ ಕೆಂಪುನಾರಾಯಣ, ನಂದಳಿಕೆ-ಲಕ್ಷ್ಮೀನಾರಾಣಪ್ಪ (ಮುದ್ದಣ) ಮುಂತಾದ ಕವಿಗಳು ಗದ್ಯ ಪ್ರಕಾರದ ಮೇಲೆ ವಿಶೇಷ ಪ್ರೀತಿಯನ್ನು ತೋರಿಸಿದ್ದರು. ಕೆಂಪುನಾರಾಯಣನ ಮುದ್ರಾಮಂಜೂಷವಾಗಲೀ, ಮುದ್ದಣ 'ಶ್ರೀರಾಮಾಶ್ವಮೇದ' 'ಅದ್ಬುತರಾಮಾಯಣ' ಕೃತಿಗಳಾಗಲೀ ಗದ್ಯಕ್ಕೆ ವಿಶೇಷ ಪ್ರಾಧ್ಯಾನ್ಯತೆಯನ್ನು ಕೊಟ್ಟಿದ್ದವು. ಮುದ್ದಣನಂತೂ 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂಬ ಘೋಷಣೆಯನ್ನೆ ಹೊರಡಿಸಿದ, ಆದರೆ ಹೊಸಗನ್ನಡ ಸಾಹಿತ್ಯದಲ್ಲಿ ಗದ್ಯಕ್ಕಿಂತ ಪದ್ಯವೇ ಹೆಚ್ಚು ಸ್ಥಾನ ಮಾನವನ್ನು ಪಡೆಯಿತು ಎನ್ನಬಹುದು. ಮುಂದೆ ಇಂಗ್ಲಿಷ್‌ನ ರೊಮ್ಯಾಂಟಿಕ್ ಕಾವ್ಯ, ಷೇಕ್ಸ್‌ಪಿಯರ್‌ನ ನಾಟಕಗಳು, ಗ್ರೀಕ್‌ನ ನಾಟಕಗಳು ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯದ ಆರಂಭಕಾಲದಲ್ಲಿ ಅಪಾರವಾದ ಪರಿಣಾಮಗಳನ್ನು ಬೀರಿದವು. ಬಿ.ಎಂ.ಶ್ರೀಯವರ 'ಇಂಗ್ಲೀಷ್ ಗೀತೆ'ಗಳು, 'ಅಶ್ವತ್ಥಾಮನ್', 'ಪಾರಸಿಕರು' ನಾಟಕಗಳು ಹೊಸರೂಪಗಳನ್ನು, ಛಂದೋಬಂಧಗಳನ್ನು ಹೊಸಕನ್ನಡ ಕಾವ್ಯಕ್ಕೆ ಒದಗಿಸಿದವು. ಅದೇ ರೀತಿಯಲ್ಲಿ ಅನೇಕ ಹೊಸಪ್ರಕಾರಗಳು ಹುಟ್ಟಿಕೊಂಡವು, ಮತ್ತು ಈಗಾಗಲೇ ಇದ್ದ ಕೆಲವು ಪ್ರಕಾರಗಳು ಹೊಸ ರೂಪವನ್ನು ಪಡೆದುಕೊಂಡವು. ಈ ರೀತಿ ನವೀನ ರೂಪ ಪಡೆದ ಹೊಸಗನ್ನಡ ಕಾವ್ಯ ಪರಂಪರೆಗೆ ಕುವೆಂಪುರವರು 'ನವೋದಯ' ಎಂದು ಕರೆದು, ಅದಕ್ಕೆ ಮತ್ತೊಂದು ರೂಪವನ್ನು ನೀಡಿದರು.

ಈ ನವೋದಯ ಸಾಹಿತ್ಯ ಪ್ರಕಾರದಲ್ಲಿ ಗದ್ಯ ಸ್ವರೂಪವು ಹೊಸರೂಪದಿಂದ ಕಂಗೊಳಿಸತೊಡಗಿತು. 'ಪ್ರಬಂಧ' ಸ್ವರೂಪವು ಪ್ರಾರಂಭವಾದದು ಈ ನವೀನ ರೂಪದಲ್ಲಿಯೇ ಎನ್ನಬಹುದು. ಇಂಗೀಷಿನ 'ಎಸ್ಸೆ' ಕನ್ನಡದಲ್ಲಿ ಪ್ರಬಂಧವಾಯಿತು. ಒಬ್ಬ ಸಾಹಿತಿ ತನ್ನ ವೈಯಕ್ತಿಕ ನಿಲುವನ್ನು ಮುಕ್ತವಾಗಿ ಚರ್ಚಿಸುವಂತಹ ವಾತಾವರಣ ಈ ಪ್ರಬಂಧ ಸಾಹಿತ್ಯದಲ್ಲಿ ಉಂಟಾಯಿತು. ಈ ಪ್ರಬಂಧ ತನ್ನದೇ ಆದ ಆಳ – ವಿಸ್ತಾರಗಳನ್ನು ಒಳಗೊಂಡಿರುವುದಲ್ಲದೆ, ಯಾವುದೇ ವಿಷಯಗಳನ್ನು ಅಂದರೆ ಸಣ್ಣ ವಿಚಾರ, ಗಂಭೀರ ವಿಚಾರ, ಹಾಸ್ಯ, ರಸನಿಮಿಷಗಳನ್ನೆಲ್ಲಾ ಮುಕ್ತವಾಗಿ

ಚರ್ಚಿಸಬಹುದಾಂಥಹ ಆವರಣವನ್ನು ಒಳಗೊಂಡಿದೆ. ಆದ್ದರಿಂದ ನಮ್ಮ ನವೋದಯದ ಪ್ರಾರಂಭದ ಪ್ರಸಿದ್ಧ ಸಾಹಿತಿಗಳೆಲ್ಲರೂ ಈ ಪ್ರಕಾರದಲ್ಲಿ ರಚಿಸಿ ಯಶಸ್ವಿಯಾದರು.

ಇವರಲ್ಲಿ ಕುವೆಂಪು, ಬೇಂದ್ರೆ, ಗೊರೂರು, ಕಾರಂತ, ಪು.ತಿ.ನ ಮುಂತಾದವರು ಪ್ರಬಂಧ ಪ್ರಕಾರದಲ್ಲಿ ರಚಿಸಿ, ಸಾಕಷ್ಟು ಹೆಸರನ್ನು ಪಡೆದರು. ಬೇಂದ್ರೆಯವರು ತಮ್ಮ ಕಾರ್ಯಕ್ಷೇತ್ರವನ್ನು ಹೆಚ್ಚಾಗಿ 'ಕಾವ್ಯ'ದಲ್ಲಿ ವಿಸ್ತರಿಸಿಕೊಂಡರೂ, ಅವರ ಕೆಲವೇ ಗದ್ಯರಚನೆಗಳು ಕನ್ನಡ ಪ್ರಬಂಧ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದಿದೆ. ಕುವೆಂಪು ಅವರು ಸಾಹಿತ್ಯದ ಪ್ರತಿಯೊಂದು ಪ್ರಕಾರದಲ್ಲೂ ತಮ್ಮ ಪ್ರತಿಭೆಯನ್ನು ತೋರಿಸಿದ ಮಹಾನ್ ಸಾಹಿತಿ. ಇವರ 'ಮಲೆನಾಡಿನ ಚಿತ್ರಗಳು' ಕನ್ನಡ ಪ್ರಬಂಧ ಕ್ಷೇತ್ರದಲ್ಲಿ ಹೊಸ ಲೋಕವನ್ನು ತೆರೆದಿರುವುದನ್ನು ಕಾಣಬಹುದು. ಹಾಗೆಯೇ ಕಾರಂತರ ಪ್ರಬಂಧಗಳು, ಗೊರೂರರ ಪ್ರಬಂಧಗಳು ತಮ್ಮದೇ ಆದ ಛಾಪನ್ನು ಮೂಡಿಸಿವೆ.

ನವೋದಯ ಕಾವ್ಯದ ಮತ್ತೊಬ್ಬ ಮಹಾನ್ ಚೇತನಾ ಪು.ತಿ.ನರಸಿಂಹಚಾರ್, ಇವರ ಬಾಲ್ಯ ಜೀವನವೇ ಬಹಳ ವೈಶಿಷ್ಟ್ಯ ಪೂರ್ಣವಾಗಿರುವುದರಿಂದ ಇವರ ಸಾಹಿತ್ಯವು ಬಹಳ ವಿಶೇಷತೆಗಳನ್ನು ಒಳಗೊಂಡಿದೆ. ಇವರ ಹುಟ್ಟೂರು ಮೇಲುಕೋಟೆ, ಮನೆ ಮಾತು ತಮಿಳು, ವಿದ್ಯಾಭ್ಯಾಸ 'ಸಂಸ್ಕೃತ' ಇವೆಲ್ಲಾ ಬಾಲ್ಯದಲ್ಲಿ ಪು.ತಿ.ನರಿಗೆ ದೊರೆತ ಪರಂಪರೆಯ ಸಂಸ್ಕೃತಿಯ ವಾತಾವರಣ. ಮುಂದೆ ವಿದ್ಯಾಭ್ಯಾಸ ಮೈಸೂರಲ್ಲಿ ಆದರೂ, ಇಂಗ್ಲೀಷನ್ನೂ ಕಲಿತು, ಸೈನ್ಯ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದರೂ, ಅವರ ಸಾಹಿತ್ಯ ಅಪೂರ್ವವಾದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಚನೆಯಾಗಿ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆಯಿತು. ಆಧುನಿಕತೆಯನ್ನು ಸ್ವೀಕರಿಸುತ್ತಾ, ಅದರ ಜೊತೆಗೆ ಸಂಸ್ಕೃತಿಯ ರೂಪರೇಷೆಗಳನ್ನು ಆಳವಾಗಿ ತಮ್ಮ ಸಾಹಿತ್ಯದಲ್ಲಿ ಒಡಮೂಡಿಸಿದಂತಹ ಅಪೂರ್ವಕವಿ ಇವರು.

ಬದುಕನ್ನು ವಿಡಂಬಿಸುವುದಕ್ಕಿಂತ, ಅದನ್ನು ಪ್ರೀತಿಸುವುದು ಮೇಲು ಎಂಬ ಮನೋಧರ್ಮದ ಪು.ತಿ.ನ ಅವರು ತಮ್ಮ ಕೃತಿಗಳಲ್ಲಿ ತೋರುವ ಜೀವನ ಪ್ರೀತಿ ಅಸಾಧಾರಣವಾದದ್ದು, ನಿರಾಶೆಯ ನಡುವೆಯೇ 'ನಕ್ಷತ್ರ'ದ ಮಿನುಗುವಿಕೆಯನ್ನು ಕಾಣುವಂತಹ ಆತ್ಮವಂತರು ಪು.ತಿ.ನ ಎನ್ನಬಹುದು. ಮನೆಯಲ್ಲಿ ತಮಿಳು ಮಾತಾನಾಡಿದರೂ, ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ಶ್ರೀವೈಷ್ಣವ ಸಾಹಿತಿಗಳಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದವರು ಪು.ತಿ.ನರಸಿಂಹಚಾರ್‌ರವರು.

ನವೋದಯ ರತ್ನತ್ರಯರಲ್ಲಿ ಪು.ತಿ.ನ ವಿಭಿನ್ನರಾಗಿ ನಿಲ್ಲುವುದು ಅವರ ನಿರೂಪಣಾ ಭಾಷೆ, ಹಾಗೂ ತಮ್ಮ ರಚನೆಗಳಲ್ಲಿ ರೂಪಿಸಿಕೊಂಡ ಶ್ರೀವೈಷ್ಣವ ತತ್ವಸಿದ್ಧಾಂತಗಳ ಒಂದು ಆವರಣದಿಂದ. ಇವರ ಅನೇಕ ಕೃತಿಗಳು ಶ್ರೀವೈಷ್ಣವ ಸಿದ್ಧಾಂತವನ್ನು ನೇರವಾಗಿಯೇ ಪ್ರಸ್ತಾಪಿಸುತ್ತದೆ. ಅದರಲ್ಲೂ ಕೆಲವು ಪ್ರಬಂಧಗಳೂ ಶ್ರೀವೈಷ್ಣವತತ್ವವನ್ನೂ, ಮೇಲುಕೋಟೆಯ ಶ್ರೀವೈಷ್ಣವ ಸಂಪ್ರದಾಯ ಆಚರಣೆಗಳನ್ನೂ ಬಹಳ ಮುಕ್ತವಾಗಿ ಓದುಗನ ಕಣ್ಣಮುಂದೆ ನಿಲ್ಲಿಸುತ್ತವೆ. ಈ ಸಂಪ್ರದಾಯ, ಆಚರಣೆಗಳ

ಜೊತೆಯಲ್ಲಿಯೇ ಆಧುನಿಕತೆಯನ್ನು ಪ್ರಶಂಸನೀಯತೆಯಿಂದ ಬರಮಾಡಿಕೊಳ್ಳುವ ಪು.ತಿ.ನ ಬಹಳ ವಿಶೇಷವಾಗಿ ಕಾಣಿಸುತ್ತಾರೆ. ಇಂತಹ ವಿಶೇಷತೆಯನ್ನು ಪು.ತಿ.ನರ ಪ್ರಬಂಧಗಳ ಮೂಲಕ ಚರ್ಚಿಸುವುದೇ ನನ್ನ ಅಧ್ಯಯನದ ಉದ್ದೇಶ ಎನ್ನಬಹುದು. ಇದುವರೆಗೂ ಪು.ತಿ.ನ ರ ಸಾಹಿತ್ಯದ ಅಧ್ಯಯನವೆಲ್ಲಾ ಅವರ ಭಾಷಾ ಶೈಲಿಯ ಕ್ಲಿಷ್ಟತೆಯನ್ನು ಕುರಿತೋ, ಅವರ ಕಾವ್ಯ ಪ್ರತಿಮೆಗಳ ಪುರಾಣಸ್ವಭಾವವನ್ನು ಕುರಿತೋ, ಅಥವಾ ಭಾವಗೀತೆಗಳ ಲಯ ಸ್ವಾರಸ್ಯವನ್ನೊ ಕುರಿತು ನಡೆಸಿದ್ದಾಗಿದೆ. ಅವರ ಒಂದು ಸಾಂಸ್ಕೃತಿಕ ಆವರಣದ ಅಧ್ಯಯನವು ಈ ಪ್ರಬಂಧದ ಉದ್ದೇಶವಾಗಿದೆ ಎನ್ನಬಹುದು.

ಪು.ತಿ.ನ ರಿಗೆ ವಿಶಿಷ್ಟಾದ್ವೈತದಲ್ಲಿ ಯಾವ ತತ್ತ್ವಗಳೂ ಪ್ರಿಯವಾಗಿದ್ದವು, ಅವುಗಳನ್ನು ಪ್ರಬಂಧಗಳಲ್ಲಿ ಹೇಗೆ ನಿರೂಪಿಸುತ್ತಾರೆ ಎಂಬುದನ್ನು ತಿಳಿಯುವ ಉದ್ದೇಶದಿಂದಲೂ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಶ್ರೀವೈಷ್ಣವ ಧರ್ಮ ಕ್ರಿ.ಶ ಹನ್ನೆರಡನೇ ಶತಮಾನದ ಪೂರ್ವದಿಂದಲೇ, ಅಂದರೆ ರಾಮಾನುಜಾಚಾರ್ಯರಿಗಿಂತ ಮೊದಲೇ ಕರ್ನಾಟಕದಲ್ಲಿ ಪ್ರವೇಶವನ್ನು ಪಡೆದು ಪ್ರಸಿದ್ಧಿಯನ್ನು ಪಡೆದಿತ್ತು, ಅದರ ಚಾರಿತ್ರಿಕ ಹಿನ್ನೆಲೆಯನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿದೆ.

ಅವರ ಪ್ರಬಂಧಗಳಲ್ಲಿ ಕಂಡುಬರುವ ಶ್ರೀವೈಷ್ಣವ ತತ್ತ್ವದೊಡನೆ, ಅವರ ಇತರ ಸಾಹಿತ್ಯ ಕೃತಿಗಳಲ್ಲಿ ಅಂದರೆ ಅವರ ಕಾವ್ಯಗಳು, ಮಹಾಕಾವ್ಯ 'ಶ್ರೀಹರಿಚರಿತೆ', ಅವರ ಗೀತನಾಟಕಗಳಲ್ಲಿ ಕಂಡು ಬರುವ ಸಿದ್ಧಾಂತವನ್ನು ಬಹಳ ಸ್ಥೂಲವಾಗಿ ಗಮನಿಸಲು ಮಾತ್ರ ಸಾಧ್ಯವಾಗಿದೆಯೇ ಹೊರತು ಸಂಪೂರ್ಣ ವಿಶ್ಲೇಷಣೆ ಮಾಡಲು ಸಾಧ್ಯವಾಗಿಲ್ಲ. ಏಕೆಂದರೆ ಅದು ಬೇರೆಯದೇ ಆದ ಸ್ವತಂತ್ರ ಅಧ್ಯಯನದ ವಸ್ತು ಎಂಬುದು ನನ್ನ ಭಾವನೆ.

ಹಾಗೆಯೇ ಮೇಲುಕೋಟೆಗೂ, ಪು.ತಿ.ನ ರಿಗೂ ಇರುವ ಅವಿನಾಭಾವ ಸಂಬಂಧವನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಿದ್ದೇನೆ, ಮೇಲುಕೋಟೆಯ ಪರಿಸರದ ಶ್ರೀವೈಷ್ಣವ ಆಚರಣೆಗಳನ್ನು ಪು.ತಿ.ನ ಹೇಗೆ ಕಾಣುತ್ತಾರೆ ಎಂಬುದನ್ನು ಇಲ್ಲಿ ಗಮನಿಸಲಾಗಿದೆ. ಹಾಗೆಯೇ ಇತರ ಧರ್ಮಗಳ ತತ್ತ್ವಗಳ ಬಗೆಗೆ ಪು.ತಿ.ನ ರ ನಿಲುವು ಎಂತಹುದು ಎಂಬುದರ ಕಡೆಗೂ ಯೋಚಿಸಲಾಗಿದೆ.

ವಿಶಿಷ್ಟಾದ್ವೈತದ ಪ್ರವರ್ತಕರಾದ ಶ್ರೀರಾಮಾನುಜಾಚಾರ್ಯರು, ಆಳ್ವಾರರು, ಇತರ ಆಚಾರ್ಯರುಗಳ ಬಗ್ಗೆ ಪು.ತಿ.ನ ರವರಲ್ಲಿ ಇದ್ದಂತಹ ಭಾವನೆಗಳನ್ನು ಇಲ್ಲಿ ಗಮನಿಸಲಾಗಿದೆ.

'ಅಯ್ಯಂಗಾರ್' ಪಂಗಡದ ಜನ ಅಡಿಗೆಯ ವಿಚಾರದಲ್ಲಿ ತುಂಬಾ ನಿಸ್ಸಿಮರು ಬಹಳ ಹೆಸರುವಾಸಿ. ಹಬ್ಬ-ಹರಿದಿನಗಳಲ್ಲಿ ವಿಶೇಷವಾದ ತಿಂಡಿಗಳನ್ನು ತಯಾರಿಸಿ, ಅದನ್ನು ತಮಗೆ ಪ್ರೀತಿ ಪಾತ್ರರಾದವರಿಗೆಲ್ಲಾ, ಅವರು ಯಾವ ಧರ್ಮ –ಗುಂಪಿಗೆ ಸೇರಿದವರಾಗಿರಲಿ ಅವರಿಗೆಲ್ಲಾ ಹಂಚಿ ಸಂತೋಷ ಪಡುತ್ತಾರೆ. ಪು.ತಿ.ನ ಅವರು ಅಂತಹ ವಿಶಾಲ ಹೃದಯಿಗಳ ಗುಂಪಿಗೆ ಸೇರಿದವರೇ. ಅವರ ಅನೇಕ ಕೃತಿಗಳಲ್ಲಿ ಅದರಲ್ಲೂ ಪ್ರಬಂಧಗಳಲ್ಲಿ ಕಾಣಿಸಿಕೊಳ್ಳುವ, ಶ್ರೀವೈಷ್ಣವರಿಗೆ ವಿಶೇಷವಾದ ಕೆಲವು

'ಪಾಕ'ಗಳನ್ನು ಪ್ರಸ್ತಾಪಿಸುತ್ತಾರೆ. ಅದನ್ನು ಇಲ್ಲಿ ಗಮನಿಸಲಾಗಿದೆ. ಅದು ವಿಶೇಷ ಅಧ್ಯಯನ ಎಂದು ಅನ್ನಿಸಿಕೊಳ್ಳದಿದ್ದರೂ, ಅದರಿಂದ ಪು.ತಿ.ನ ಅವರ ಬರವಣಿಗೆಗೆ ಒಂದು ಸೊಗಸು ಬಂದಿರುವುದನ್ನು ಮರೆಯಲು ಸಾಧ್ಯವಾಗುವುದಿಲ್ಲ.

ಹೀಗೆ ಶ್ರೀವೈಷ್ಣವ ಸಂಪ್ರದಾಯದ ತತ್ವಗಳು ಇವರ ವಿಚಾರಲಹರಿಯ ಹಿನ್ನೆಲೆಯಲ್ಲಿ ಪ್ರಬಂಧಗಳಲ್ಲಿ ಹೇಗೆ ಮೂಡಿಬಂದಿದೆ ಎನ್ನುವುದನ್ನು ಸ್ಥೂಲವಾಗಿ ನಿರೂಪಿಸಲು ಪ್ರಯತ್ನ ಈ ಅಧ್ಯಯನದ ಮೂಲ ಉದ್ದೇಶ ಎನ್ನಬಹುದು.

## ಭಗವದ್ ರಾಮಾನುಜಾಚಾರ್ಯರು



## ಕರ್ನಾಟಕದ ಸಂದರ್ಭದಲ್ಲಿ ಶ್ರೀವೈಷ್ಣವ ಧರ್ಮ – ಒಂದು ಚಾರಿತ್ರಿಕ ಹಿನ್ನೆಲೆ

ಈ ಅಧ್ಯಯನ ಪ್ರವೇಶದ ಪೂರ್ವಭಾವಿಯಾಗಿ ಧರ್ಮದ ಬಗ್ಗೆ ಕೆಲವು ಚಿಂತನೆಗಳನ್ನು ನಡೆಸುತ್ತಾ, ಧರ್ಮದ ಲಕ್ಷಣ, ಸ್ವರೂಪ, ಪ್ರಯೋಜನಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಬಹುದು. ಮಾನವನ ಸಂಸ್ಕೃತಿ ಬಿಂಬಿತವಾಗುವುದು ಒಂದು ಧರ್ಮದಿಂದ ಅಂದರೆ ಮನುಷ್ಯ ಹುಟ್ಟಿದ ಕ್ಷಣವೇ ಆತ ಕೆಲವು ಕಟ್ಟುಪಾಡಿಗೆ, ವ್ಯವಸ್ಥೆಗೆ ಒಳಗಾಗುತ್ತಾನೆ. ಈ ಕಟ್ಟುಪಾಡುಗಳ ಜೊತೆಗೆ ನೀತಿಬದ್ಧವಾಗಿ, ಮನುಷ್ಯ ಮನುಷ್ಯನಾಗಿ ಬಾಳುವಂತಹ ರೀತಿಯನ್ನು ಧರ್ಮವೆನ್ನಬಹುದು. ಧರ್ಮದ ಮೂಲವೇ ನೀತಿಯುಕ್ತ ಸಂಸ್ಕೃತಿ ಎನ್ನಬಹುದು. ಆದ್ದರಿಂದಲೇ ಯಾವ ಧರ್ಮವೂ ಮನುಷ್ಯ ಅನೀತಿವಂತನಾಗಲು ಪ್ರೇರೇಪಿಸುವುದಿಲ್ಲ. ಕೆಟ್ಟ ಮೌಲ್ಯಗಳ ವಿರುದ್ಧ ಸ್ವರವೆತ್ತಿ ಉತ್ತಮ ನಡವಳಿಕೆಗಳನ್ನು ನೀಡಲೋಸ್ಕರವೇ ಪ್ರಪಂಚದಾದ್ಯಂತ ಎಲ್ಲಾ ಧರ್ಮಗಳೂ ತಲೆಯೆತ್ತಿರುವುದನ್ನು ಕಾಣಬಹುದು. ಅಂದರೆ ಅನೀತಿಯಿಂದ - ನೀತಿಯೆಡೆಗೆ, ಅನಾಗರಿಕತನದಿಂದ ನಾಗರಿಕತೆಯೆಡೆಗೆ ತರುವ ಪ್ರಯತ್ನವೇ ಧರ್ಮದ ಲಕ್ಷಣವೆನ್ನಬಹುದು.

ಮನುಷ್ಯ ತನ್ನ ಜನನ ಕಾಲದಿಂದ ಅಂತ್ಯಕಾಲದವರೆಗೂ ಆಚರಿಸುವ ವಿಧಿವಿಧಾನಗಳು, ನೈತಿಕ - ನೀತಿಗಳು, ಪಾಪ-ಪುಣ್ಯಗಳು, ಮೃಗೀಯತೆ–ಮಾನವೀಯತೆ ಸರಿ-ತಪ್ಪುಗಳ ಬಗ್ಗೆ ಅರಿವನ್ನು ಮೂಡಿಸಿಕೊಂಡು ಮಾನವೀಯತೆಯನ್ನು ಸಾಧಿಸಿಕೊಳ್ಳುವುದೇ ತಾನರಿತ ಧರ್ಮದ ಮೂಲಕ ಅನ್ನಬಹುದು. ಆದ್ದರಿಂದಲೇ ಒಂದು ಧರ್ಮದ ಆಚರಣೆಗಳು ಒಂದು ಸಮಾಜದ ಮೇಲೆ ಉಂಟು ಮಾಡುವ ಪರಿಣಾಮವೇ ಆ ಸಮಾಜದ ಅಳಿವು – ಉಳಿವಿಗೆ ಕಾರಣವಾಗುತ್ತದೆ ಎನ್ನಬಹುದು.

ಧರ್ಮದ ಇಂತಹ ಲಕ್ಷಣಗಳೂ ಎಲ್ಲೋ ಒಂದು ಕಡೆ ಜಡತ್ವವನ್ನು ಅನುಭವಿಸಿದರೆ, ಅಥವಾ ಆ ಧರ್ಮದ ತಿರುಳಲ್ಲಿ ಜೀವಂತಿಕೆಯ ದರ್ಶನಗಳಿಲ್ಲದೇ ಆಷಾಢಭೂತಿತನವನ್ನು ಅಪ್ಪಿಕೊಂಡಾಗ ಅದರ ವಿರುದ್ಧವಾಗಿ ಮತ್ತೊಂದು ಸಂಸ್ಕೃತಿಯ ನಿರ್ಮಾಣವಾಗುತ್ತದೆ. ಮತ್ತೊಂದು ಧರ್ಮದ ಉದಯವಾಗುತ್ತವೆ.

ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ ಒಂದೊಂದು ಧರ್ಮದ ಉದಯವೂ ಈ ಕಾರಣದಿಂದಲೇ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಒಂದು ಧರ್ಮದ ಸಂಸ್ಕೃತಿ ಮತ್ತೊಂದು ಧರ್ಮದ ಸಂಸ್ಕೃತಿಯ ವಿರುದ್ಧ ತಲೆಯೆತ್ತಿ ನಿಂತರೂ ಎಲ್ಲಾ ಧರ್ಮಗಳ ಸೂತ್ರ ಮಾನವೀಯತೆಯೇ ಎಂಬುದು ಮಾತ್ರ ಸತ್ಯ. ಆ ಸೂತ್ರದ ಮುಖಾಂತರವೇ ಮಾನವನ ಉದ್ಧಾರ ಎನ್ನುವುದು ಸಹ ಸತ್ಯ. ಇಂದಿಗೂ ನಡೆಯುತ್ತಿರುವ ಮಾನವೀಯ ಮೌಲ್ಯ ಸಂಘರ್ಷಗಳ ಕಾರಣವೂ ಈ ಧರ್ಮವೇ ಎಂಬುದು ಪರಮಸತ್ಯ.

ಇಂತಹ ಅನೇಕ ಧರ್ಮಗಳ ತವರೂರು ಭಾರತ. ವೈವಿಧ್ಯವೇ ಭಾರತದ ಲಕ್ಷಣ. ವಿವಿಧಭಾಷೆ, ವಿವಿಧ ವೇಷ, ವಿವಿಧಜಾತಿ, ವಿವಿಧ ಧರ್ಮಗಳ ನೆಲೆಯೂರು ಈ ಭಾರತ. ಆದ್ದರಿಂದಲೇ ಭಾರತ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ರಾಷ್ಟ್ರವೆಂದೆನಿಸಿಕೊಂಡಿದೆ. ಅನೇಕ ಧರ್ಮಗಳಿಂದ ತುಂಬಿರುವ ಈ ರಾಷ್ಟ್ರದಲ್ಲಿ ಧರ್ಮವೇ ಮಾನವತೆಯ ಸಾಕ್ಷಾತ್ಕಾರಕ್ಕೆ ಪ್ರೇರಕ, ಸಾಧಕವಾಗಿರುವಂತದ್ದು. ವೈದಿಕ, ಹಿಂದೂ, ಜೈನ, ಬೌದ್ಧ ಧರ್ಮಗಳ ನೆರಳಲ್ಲಿ ಮತ್ತಷ್ಟು ಧರ್ಮಗಳು ತಮ್ಮದೇ ಆದ ನಿಯಮಗಳನ್ನು ಒಳಗೊಂಡು ಜನನ ತಾಳಿರುವುದನ್ನು ಗಮನಿಸಬಹುದು. ಒಂದೊಂದು ಧರ್ಮವೂ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದು, ತನ್ನದೇ ಆದ ಸಿದ್ಧಾಂತಗಳನ್ನೂ ರೂಢಿಸಿಕೊಂಡು, ತಮ್ಮದೇ ಆದಂತಹ ಕಾಣಿಕೆಯನ್ನು ಭಾರತಕ್ಕೆ ಈ ಜಗತ್ತಿಗೆ ನೀಡಿವೆ. ಇಂತಹುದೇ ವೈಶಿಷ್ಟ್ಯಗಳೊಡನೆ ರೂಪುಗೊಂಡ ಧರ್ಮಗಳಲ್ಲಿ ಶ್ರಿವೈಷ್ಣವ ಧರ್ಮವು ಒಂದು. ತನ್ನದೇ ಆದ ದರ್ಶನ, ಸಿದ್ಧಾಂತ, ಚರಿತ್ರೆಗಳನ್ನು ಈ ಧರ್ಮ ರೂಪಿಸಿಕೊಂಡಿದೆ.

ಈ ಧರ್ಮದ ಬಗ್ಗೆ ಅನೇಕ ಐತಿಹ್ಯಗಳಿವೆ. ಶ್ರೀಕೃಷ್ಣನೇ ವೈಷ್ಣವ ಮತ ಸ್ಥಾಪಕನೆಂದು ಹೇಳಲಾಗುತ್ತದೆ. ಇದನ್ನು ಆಗ ಭಾಗವತ ಧರ್ಮವೆಂದು ಕರೆಯಲಾಗುತ್ತಿತ್ತು, ಮುಂದೆ ವಿಷ್ಣುವನ್ನು ಭಗವಂತನ ಜೊತೆ ಸಮೀಕರಿಸಿ ವೈಷ್ಣವ ಧರ್ಮವಾಯಿತು ಎನ್ನುತ್ತಾರೆ. ಮುಂದಕ್ಕೆ ವೈದಿಕ ಭಾಗವತದ ಜೊತೆ ಸಮೀಕರಣಗೊಂಡವು. ಈ ಎರಡೂ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬಂದದ್ದೇ ವೈಷ್ಣವ ಧರ್ಮ, ಮುಂದೆ ನಾರಾಯಣನ ಜೊತೆಯಲ್ಲಿ ಲಕ್ಷ್ಮಿಯನ್ನು ಸೇರಿಸಿ ಪೂಜಿಸುವ ಒಂದು ಜನಾಂಗ ತಮ್ಮನ್ನು ಶ್ರೀವೈಷ್ಣವರೆಂದು ಕರೆದುಕೊಂಡರು. ಆದ್ದರಿಂದ ಈ ಧರ್ಮ ಕ್ರಿಸ್ತಪೂರ್ವದಲ್ಲಿಯೇ ಪ್ರಚಾರಗೊಂಡಿದ್ದ ಧರ್ಮವೆನ್ನಬಹುದು. ವೇದ, ಉಪನಿಷತ್ತು, ಭಾಗವತ, ಆಗಮಗಳು, ರಾಮಾಯಣ, ಮಹಾಭಾರತ, ಸ್ಮೃತಿಗಳೂ ಎಲ್ಲದರಲ್ಲೂ ಶ್ರಿವೈಷ್ಣವ ಧರ್ಮದ ಸೂತ್ರಗಳಿವೆ ಎನ್ನಬಹುದು.

ಇಂತಹ ಒಂದು ಮೂಲ ನೆಲೆಯನ್ನು ಅನುಸರಿಸಿದ ತಮಿಳುನಾಡಿನ ಆಳ್ವಾರರು ಶ್ರಿವೈಷ್ಣವ ಧರ್ಮವನ್ನು ತಮಿಳುನಾಡಿನಲ್ಲಿ ಪ್ರಸಿದ್ಧಿಪಡಿಸಿದರು. ಅವರು ಮಾತ್ರವಲ್ಲದೇ ಅನೇಕ ಆಚಾರ್ಯರುಗಳು ಈ ಧರ್ಮವನ್ನು ರಕ್ಷಿಸಿ ಬೆಳೆಸಿದರು ಎನ್ನಬಹುದು. ಆಳ್ವಾರರ ಪ್ರಬಂಧಗಳೂ ವಿಷ್ಣುಭಕ್ತಿಯನ್ನೇ ಮೂಲವಾಗಿಟ್ಟು ರಚಿತವಾಗಿರುವಂತಹವು. ಈ ಎಲ್ಲಾ ವೈದಿಕ ಗ್ರಂಥಗಳ ನಾಯಕನು ವಿಷ್ಣುವೇ.

ಆತನೇ ಪರದೈವ, ಆತನೇ ಮೋಕ್ಷಕ್ಕೆ ಕಾರಣ. ದಿವ್ಯ ಪ್ರಬಂಧಗಳೂ ಅದನ್ನೇ ಸಾರುತ್ತವೆ. ಕರ್ಮ, ಜ್ಞಾನ – ಭಕ್ತಿಗಳ ಮೂಲಕ ಆತನನ್ನು ಸಮೀಪಿಸುವುದೇ ಶ್ರೀವೈಷ್ಣವಧರ್ಮದ ಸಾತತ್ಯ. ಇಂತಹ ಸಿದ್ಧಾಂತಗಳು ಕೆಲವು ವೈರುಧ್ಯಗಳನ್ನು ಹೊಂದಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂದು ವಿಭಾಗವಾಗಿರುವುದನ್ನು ಕಾಣಬಹುದು. ತಮಿಳುನಾಡಿನಲ್ಲಿ ಆಳ್ವಾರರ ಮುಖಾಂತರ ನಂತರ ನಾಥಮುನಿಗಳ, ಯಾಮುನಾಚಾರ್ಯರ ಪ್ರಭಾವದಿಂದ ಪ್ರೇರಿತವಾದ ಶ್ರೀವೈಷ್ಣವ ಧರ್ಮ 12 ನೇ ಶತಮಾನದಲ್ಲಿ ರಾಮಾನುಜಾಚಾರ್ಯರಿಂದ ಹೆಚ್ಚಿನ ಪ್ರಸಿದ್ಧಿಯನ್ನು ಪಡೆಯಿತು. ಆ ಧರ್ಮದ ಸಿದ್ಧಾಂತಗಳು ವಿಶಿಷ್ಟಾದ್ವೈತ ಸಿದ್ಧಾಂತವೆಂದು ಹೆಸರನ್ನು ಪಡೆಯಿತು. ದಕ್ಷಿಣದಲ್ಲಿ ಪ್ರಾರಂಭವಾದ ಈ ಧರ್ಮ ಕರ್ನಾಟಕಕ್ಕೆ ಬಂದದ್ದು, ಪ್ರಸಿದ್ಧಿಯನ್ನು ಪಡೆದದ್ದು ಹೇಗೆ ಎಂಬುದು ಗಮನಿಸಬೇಕಾದ ಅಂಶ. ಇದನ್ನು ಎರಡು ಹಂತಗಳಲ್ಲಿ ವಿಭಜನೆ ಮಾಡಬಹುದು.

### ಅ) ಪ್ರಾಚೀನಯುಗ

ಕರ್ನಾಟಕದಲ್ಲೂ ಸಹ ವೈದಿಕ ಧರ್ಮದಿಂದ ಸಾರಗೊಳಿಸಿದ ಭಾಗವತ ಧರ್ಮವೂ ಪ್ರಚಲಿತದಲ್ಲಿತ್ತು. ಏಕೆಂದರೆ ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೇ ಪ್ರಾರಂಭವಾಗುತ್ತದೆ. ಹಾಗೆಯೇ ಆರನೆಯ ಶತಮಾನದಲ್ಲಿ ಚಾಳುಕ್ಯರಾಜ ಮಂಗಳೇಶನು ಬಾದಾಮಿಯಲ್ಲಿ ವೈಷ್ಣವರ ಗುಹಾಂತರ ದೇವಾಲಯವನ್ನು ನಿರ್ಮಿಸಿದ್ದಾನೆ. ಅವನನ್ನು ಶಾಸನಗಳು 'ಪರಮಭಾಗವತ' ನೆಂದು ಕರೆದಿವೆ. ಮುಂದೇ ಹತ್ತನೆ ಶತಮಾನದ ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿ ವಿಷ್ಣುವಿನ ಅನುಯಾಯಿಗಳನ್ನು ವೈಷ್ಣವರೆಂದು ಕರೆದಿದೆ. ಅದೇ ಕಾಲದ ಬೇಲೂರಿನ ಶಾಸನದಲ್ಲಿ ಶ್ರೀವೈಷ್ಣವರ ಹೆಸರುಗಳು ಕಾಣಿಸಿಕೊಳ್ಳುವುದನ್ನು ನೋಡಬಹುದು. 1090 ರ ನರಸೀಪುರ ತಾಲೂಕಿನ ಒಂದು ಶಾಸನದಲ್ಲಿ ವಿಣ್ಣಕರ್ ಆಳ್ವಾರರಿಗೆ ದತ್ತಿಕೊಟ್ಟ ವಿಷಯವಿದೆ. ಇವೆಲ್ಲವನ್ನೂ ಬಿಟ್ಟರೆ ರಾಮಾನುಜಾಚಾರ್ಯರಿಗಿಂತ ಮೊದಲು ಆಳ್ವಾರರ ಪ್ರಬಂಧಗಳು ಪ್ರಭಾವವನ್ನು ಬೀರಿವೆಯೇ ಎಂಬುದನ್ನು ಅಳೆಯಲು ಸಾಧ್ಯವಿಲ್ಲ.[1]

ಮುಂದೆ 12ನೇ ಶತಮಾನದಲ್ಲಿ ಕರ್ನಾಟಕಕ್ಕೆ ರಾಮಾನುಜಾಚಾರ್ಯರ ಆಗಮನವಾಯಿತು. ಇವರ ಕರ್ನಾಟಕ ಆಗಮನವನ್ನು ಕುರಿತು ಅನೇಕ ಐತಿಹ್ಯಗಳಿವೆ. ರಾಮಾನುಜಾಚಾರ್ಯರು ಇದ್ದಂತಹ ತಮಿಳುನಾಡಿನ ಶ್ರಿರಂಗಂನಲ್ಲಿ ಅಪ್ಪಟ ಶೈವನಾಗಿದ್ದ ಕುಲೋತ್ತುಂಗ ಚೋಳನು ಆಳುತ್ತಿದ್ದು, ಅವನು ರಾಮಾನುಜಾಚ್ಯಾರ ಹಾಗೂ ಅವರ ವಿಶಿಷ್ಟಾದ್ವೈತದ ಪ್ರಸಿದ್ಧಿಯನ್ನು ಸಹಿಸಲಾರದೇ ಅವರನ್ನು ಹಿಂಸಿಸಲು ತೊಡಗಿದಾಗ ರಾಮಾನುಜರು ಕರ್ನಾಟಕಕ್ಕೆ ಆಗಮಿಸಿದರು ಎನ್ನುತ್ತದೆ. ಕೆಲವು ವಿದ್ವಾಂಸರು ಇದನ್ನು

---

[1] ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ - ಡಾ.ಎಂ. ಚಿದಾನಂದ ಮೂರ್ತಿ ಪು. 164-65

ಒಪ್ಪುತ್ತಾರೆ. ಆದರೆ ಕೆಲವರು ವಿಶಿಷ್ಟಾದ್ವೈತದ ಪ್ರಚಾರಕ್ಕಾಗಿಯೇ ರಾಮಾನುಜರು ಇಲ್ಲಿಗೆ ಬಂದರು ಎಂದೂ ಸಹ ವಾದಿಸುತ್ತಾರೆ.[1] ಕಾರಣವೇನೆ ಇರಲಿ ರಾಮಾನುಜರ ಆಗಮನ ಕರ್ನಾಟಕದಲ್ಲಿ ಶ್ರೀವೈಷ್ಣವಧರ್ಮ ನೆಲೆ ನಿಲ್ಲುವಂತಾಯಿತು ಎಂಬುದು ಮಾತ್ರ ಸತ್ಯ.

ಶ್ರೀರಾಮಾನುಜಾಚಾರ್ಯರು ಕರ್ನಾಟಕದ ದೋರ ಸಮುದ್ರಕ್ಕೆ ಆಗಮಿಸಿದಾಗ ಅದನ್ನು ಆಳುತ್ತಿದ್ದ ಹೊಯ್ಸಳರಾಜ ಬಿಟ್ಟಿದೇವನು ಜೈನನಾಗಿದ್ದು ಇವರ ಪ್ರಭಾವಕ್ಕೆ ಒಳಗಾಗಿ ಶ್ರೀವೈಷ್ಣವನಾದನೆಂದು, ತನ್ನ ಹೆಸರನ್ನು ವಿಷ್ಣುವರ್ಧನನೆಂದು ಬದಲಿಸಿಕೊಂಡನೆಂಬ ಕತೆಯಿದೆ. ಆದರೂ ಇದಕ್ಕೂ ಯಾವುದೇ ಸ್ಪಷ್ಟವಾದ ಆಧಾರವಿಲ್ಲ. ರಾಮಾನುಜರ ಪ್ರಭಾವದಿಂದ ಶ್ರೀವೈಷ್ಣವನಾದ ವಿಷ್ಣುವರ್ಧನ ಅವರಿಗಾಗಿ ಪಂಚನಾರಾಯಣ ದೇವಾಲಯ*ಗಳನ್ನು ಸ್ಥಾಪಿಸುತ್ತಾನೆ. ಮೇಲುಕೋಟೆಯ ನಾರಾಯಣ ದೇವಸ್ಥಾನವೂ ಇದರಲ್ಲಿ ಒಂದು, ಹಾಗೇಯೇ ಯತಿರಾಜ ಮಠವನ್ನು ಸ್ಥಾಪಿಸುತ್ತಾನೆ ಎನ್ನುವ ಐತಿಹ್ಯಗಳಿರುವುದನ್ನೂ ಕಾಣಬಹುದು. ವಿಷ್ಣುವರ್ಧನನಿಗಿಂತ ಮೊದಲೇ ಶ್ರೀ ವೈಷ್ಣವಧರ್ಮ ಕರ್ನಾಟಕದಲ್ಲಿ ಇದ್ದುದಕ್ಕೆ ಶಾಸನಾಧಾರಗಳಿವೆ. ಸುಮಾರು ಹದಿನಾಲ್ಕು ವರ್ಷಗಳು ಕರ್ನಾಟಕದಲ್ಲಿ ನೆಲೆನಿಂತ ಆಚಾರ್ಯರಿಂದ ವಿಶಿಷ್ಟಾದ್ವೈತ ಪ್ರಸಿದ್ಧಿಯನ್ನು ಪಡೆದು ಅವರು ಹನ್ನೆರಡು ವರ್ಷ ನೆಲೆಗೊಂಡಿದ್ದ ತಿರುನಾರಾಯಣಪುರ ಶ್ರೀವೈಷ್ಣವರ ಪವಿತ್ರ ಕ್ಷೇತ್ರವೆಂದು ಹೆಸರು ಪಡೆಯಿತು. ರಾಮಾನುಜರ ಸಿದ್ಧಾಂತ ಜಾತಿಪದ್ಧತಿಯ ಮೀರುವಿಕೆಯಿಂದಲೇ ಉನ್ನತ ಸ್ಥಾನವನ್ನು ಪಡೆದಿರುವುದು ಗಮನಿಸಬೇಕಾದ ಅಂಶ. ಏಕೆಂದರೆ ರಾಮಪ್ರಿಯ ದೇವಸ್ಥಾನವನ್ನು ಸ್ಥಾಪಿಸಿ ಹರಿಜನರನ್ನು ದೇವಾಲಯಕ್ಕೆ ಬಿಟ್ಟದ್ದು, ದೇವಾಲಯ ಸಂಸ್ಕೃತಿಯನ್ನು ಮೀರಿದ್ದು, ಮುಂದಿನ ಚಳುವಳಿಗೆ ನಾಂದಿ ಹಾಡಿತು ಎನ್ನಬಹುದು. ಹೊಯ್ಸಳರ ಕಾಲದಲ್ಲಿ ಹೀಗೆ ಶ್ರೀ ವೈಷ್ಣವ ಧರ್ಮ ಹೆಚ್ಚು ಪ್ರಸಿದ್ಧಿಯನ್ನು ಪಡೆದರೂ ಯಾವುದೇ ಶ್ರೀವೈಷ್ಣವರ ಕೃತಿಗಳು ದೊರೆಯುವುದಿಲ್ಲ. ಆದರೆ ಆ ಕಾಲದಲ್ಲಿ ಅವರ ಕೊಡುಗೆ ದೇವಾಲಯದ ಶಿಲ್ಪಕಲೆಗಳಲ್ಲಿ ಮೂಡಿರುವುದು ಗಮನಿಸಬಹುದು. ಆ ಕಾಲದಲ್ಲಿ ಕನ್ನಡದಲ್ಲಿ ಮೊದಲ ಭಾಗವತ ಕೃತಿಯಾದ 'ಜಗನ್ನಾಥವಿಜಯ' ರುದ್ರಭಟ್ಟ ಎಂಬ ಸ್ಮಾರ್ತ ಬ್ರಾಹ್ಮಣನಿಂದ ರಚಿತವಾಯಿತು.

ಮುಂದೆ ವಿಜಯನಗರ ಕಾಲದಲ್ಲಿ ಶ್ರೀವೈಷ್ಣವಧರ್ಮ ಮತ್ತಷ್ಟು ಪ್ರಸಿದ್ಧಿಯನ್ನು ಪಡೆಯಿತು. ಇವರ ಕಾಲದಲ್ಲಿ ಆಳ್ವಾರರ ಸಿದ್ಧಾಂತಗಳು ಹೆಚ್ಚಿನ ಮಾನ್ಯತೆಯನ್ನು ಪಡೆದುಕೊಂಡಿತು. ಸಂಸ್ಕೃತ ವೇದಾಂತ ಮತ್ತು ತಮಿಳಿನ ವೇದಾಂತ ಎಂದು ಎರಡು ಬಗೆಯಾಗಿ ಬೆಳೆದು ಶ್ರೀವೈಷ್ಣವ ಸಿದ್ಧಾಂತ ವಡಗಲೈ ತೆಂಗಲೈ ಎಂದು ವಿಭಾಗವಾಗಿರುವುದನ್ನು ಕಾಣಬಹುದು. ಈ ಅರಸರ ಕಾಲದಲ್ಲಿ

---

[1] ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಪು: 167

* ಬೇಲೂರಿನ ವಿಜಯನಾರಾಯಣ, ತಲಕಾಡಿನ ಕೀರ್ತಿನಾರಾಯಣ, ತೊಂಡನೂರಿನ ಲಕ್ಷ್ಮೀನಾರಾಯಣ, ಗದಗಿನ ವೀರನಾರಾಯಣ, ಮೇಲುಕೋಟೆಯ ಚೆಲುವನಾರಾಯಣ. ಈ ದೇವಾಲಯಗಳಲ್ಲಿ ಕೆಲವು ವಿಷ್ಣುವರ್ಧನ ಕಾಲಕ್ಕಿಂತ ಎಂದರೆ ಹನ್ನೆರಡನೆಯ ಶತಮಾನಕ್ಕಿಂತ ಮೊದಲೇ, ರಾಮಾನುಜಾರ ಪೂರ್ವ ಕಾಲದಲೋ ನಿರ್ಮಾಣವಾದಂತೆ ತೋರುತ್ತದೆ.

ಶ್ರೀವೈಷ್ಣವರ ಪವಿತ್ರ ಕ್ಷೇತ್ರವಾದ ಮಾಗಡಿಯ 'ತಿರುಮಲೆ' ಕ್ಷೇತ್ರ ಹಾಗೂ ಈಗ ತಿರುಪತಿ ಎಂದು ಪ್ರಸಿದ್ಧವಾಗಿರುವ ತಿರುಮಲೈ ಅಭ್ಯುದಯವನ್ನು ಪಡೆಯುತ್ತಾ ಹೋಯಿತು. ಆದರೆ ಈ ಕಾಲದಲ್ಲೂ ಯಾವ ಶ್ರೀವೈಷ್ಣವ ಕನ್ನಡ ಸಾಹಿತ್ಯಗ್ರಂಥಗಳು ರಚಿತವಾದುದು ಕಂಡು ಬರುವುದಿಲ್ಲ. ಆದರೆ ಶ್ರೀಕೃಷ್ಣದೇವರಾಯನ ಅಮುಕ್ತಮೌಲ್ಯದ ತೆಲುಗು ಗ್ರಂಥ ಆಳ್ವಾರರಲ್ಲಿ ಒಬ್ಬಳಾದ ಗೋದಾದೇವಿಯನ್ನು ಕುರಿತದ್ದು ಆದರೆ ಶ್ರೀಕೃಷ್ಣದೇವರಾಯ ಶ್ರೀವೈಷ್ಣವನಾಗಿದ್ದ ಎನ್ನುವ ನಿದರ್ಶನಗಳು ಸಿಗುವುದಿಲ್ಲ. ಹಾಗೆಯೇ ಇವರ ಹಿಂದಿನಿಂದ ಕಂಡು ಬಂದಿರುವ ಶಾಸನಗಳಲ್ಲಿ "ಶ್ರಿ ವೈಷ್ಣವ ರಕ್ಷೆ' ಎಂಬ ಮಾತು ಇವನ ಕಾಲದಲ್ಲಿ ಕಂಡು ಬರುವುದಿಲ್ಲ. ಅವನಿಗೆ ವೆಂಗಡದ ದೇವರು ಶ್ರೀವೈಷ್ಣವರ ಆಚಾರ್ಯಮೂರ್ತಿ ಎಂಬ ಕಲ್ಪನೆಯೂ ಇರಲಿಲ್ಲ. ವೆಂಗಡಕ್ಕೆ ಅವನು ನಡೆದುಕೊಂತಹ ರೀತಿಯೇ, ಕಾಳಹಸ್ತಿಯ ಶೈವಗುಡಿಗೂ ನಡೆದುಕೊಂಡನು. ಮಾಧ್ವಸಂಪ್ರದಾಯದ ವ್ಯಾಸತೀರ್ಥರ ಮೇಲೂ ಅವನಿಗೆ ಗೌರವವಿದ್ದಿತು.[1] ಈ ಅರಸರ ಕಾಲದಲ್ಲಿ ಶ್ರಿವೈಷ್ಣವರಿಂದ ಕನ್ನಡ ಗ್ರಂಥಗಳು ರಚಿತವಾಗದಿದ್ದರೂ, ವೈಷ್ಣವಪಂಥದವರೇ ಆದ ದಾಸಕೂಟದಿಂದ ಸಮೃದ್ಧವಾದ ಭಾಗವತ ಸಾಹಿತ್ಯವು ಉಂಟಾಯಿತು. ಇದರಲ್ಲಿ ಕೆಲವು ಶ್ರೀವೈಷ್ಣವ ಹರಿದಾಸರು ಇದ್ದರು ಎನ್ನುವಂತಹ ಪ್ರತೀತಿಯಿದೆ. ವೈಕುಂಠದಾಸರನ್ನು ಶ್ರೀ ವೈಷ್ಣವ ಹರಿದಾಸರಲ್ಲಿ ಒಬ್ಬರು ಎನ್ನಬಹುದು.

ಈ ಕಾಲದಲ್ಲಿ ಕನ್ನಡ ಗ್ರಂಥಗಳಿಗೆ ಶ್ರೀವೈಷ್ಣವರು ಕೊಡುಗೆಯನ್ನು ನೀಡದಿದ್ದರೂ ಸಾಳುವ, ನರಸಿಂಹನ ಕಾಲದಲ್ಲಿ ಸಮೃದ್ಧವಾಗಿ ಬೆಳೆದ ತೆಲುಗಿನ ಶ್ರೀ ವೈಷ್ಣವ ಕೀರ್ತನೆಗಳು. "ತಾಳ್ಲಪಾಕದ ಕವಿಯಾದ ಅಣ್ಣಮಾಚಾರ್ಯರು. ತಮ್ಮ ಹದಿನಾರನೆಯ ವಯಸ್ಸಿನಿಂದ ಪ್ರಾರಂಭವಾದ ಇವರ ಕೀರ್ತನಸೇವೆ, ಅವರ ಅಂತ್ಯದವರೆಗೂ ಅಂದರೆ ಸುಮಾರು ಎಂಭತ್ತು ವರ್ಷಗಳ ಕಾಲ ನಡೆದಿರುವುದು ಇತಿಹಾಸದಲ್ಲಿ ಸ್ಪಷ್ಟವಾಗುತ್ತದೆ. ಇವರಿಂದ ರಚಿತವಾದ ಕೀರ್ತನೆಗಳ ಸಂಖ್ಯೆ ಮೂವತ್ತಾರು ಸಾವಿರ. ಆದರೆ ಈಗ ದೊರಕಿರುವುದು ಹನ್ನೆರಡು ಸಾವಿರ ಮಾತ್ರ. ಈ ಕೀರ್ತನೆಗಳಲ್ಲದೆ ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಕಾವ್ಯಗ್ರಂಥಗಳನ್ನು ರಚಿಸಿರುವರು. ಸ್ಮಾರ್ತ ಬ್ರಾಹ್ಮಣರಾದ ಇವರು ಶ್ರೀವೈಷ್ಣವ ದೀಕ್ಷೆಯುನ್ನು ಪಡೆದು ಶ್ರೀವೈಷ್ಣತತ್ವದಂತೆಯೆ ತಿರುಮಲೆಯ ಮೇಲೆ ವಾಸಮಾಡುತ್ತಾ ಅವನ ಸೇವೆ ಮಾಡಿದರೆಂದು ಇತಿಹಾಸದಿಂದ ತಿಳಿಯುತ್ತದೆ. ಇವರ ಕೀರ್ತನೆಗಳನ್ನೂ ಅವರ ಮನೆತನದವರು ತಾಮ್ರದ ಹಲಗೆಗಳ ಮೂಡಿಸಿ ಅದನ್ನು ಕಾಪಾಡಿಕೊಂಡು ಬಂದಿದ್ದಾರೆ. ತಾಮ್ರದ ಮೇಲೆ ಅನೇಕ ಗ್ರಂಥಗಳನ್ನು. ಆಹೋಬಲದ ನರಸಿಂಹಸ್ವಾಮಿಯ ದೇವಾಲಯಗಳಲ್ಲಿ ಕಾಪಾಡಿಕೊಂಡು ಬರುವುದನ್ನು ಕಾಣಬಹುದು"[2]

ಮುಂದೆ ಕರ್ನಾಟಕದಲ್ಲಿ ಮೈಸೂರು ಒಡೆಯರ ಕಾಲದಲ್ಲಿ ಶ್ರೀವೈಷ್ಣವಧರ್ಮ ಔನ್ನತ್ಯವನ್ನು ಪಡೆದಿರುವುದನ್ನು ಕಾಣಬಹುದು. ರಾಮನುಜರ ಕಾಲದಿಂದಲೂ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮ ಪ್ರಸಿದ್ಧಿಯುನ್ನು ಪಡೆದಿದ್ದರೂ ಕನ್ನಡದಲ್ಲಿ ಈ ಮತಕ್ಕೆ ಸಂಬಂಧಿಸಿದ ಯಾವ ಗ್ರಂಥವೂ ರಚಿತವಾಗಿರದೇ

---

[1] ತಿರುಪತಿ ತಿಮ್ಮಪ್ಪ: ಸಾ.ಕೃ ರಾಮಚಂದ್ರರಾವ್ ಪು- 148-149, ಪ್ರ: ಅಭಿಜ್ಞಾನ 2006

[2] ತಿರುಪತಿ ತಿಮ್ಮಪ್ಪ: ಸಾ.ಕೃ. ರಾಮಚಂದ್ರರಾವ್ ಪು. 126-127

ಇರುವುದನ್ನು ನೋಡಿದೆವು. ಆದರೆ ರಾ. ನರಸಿಂಹಚಾರ್ಯರು 1570 ರಲ್ಲಿ ರಂಗಾಚಾರ್ಯ ಎನ್ನುವ ಕವಿಯೊಬ್ಬನು 'ಶ್ರೀರಂಗಮಹಾತ್ಮ' ಎನ್ನುವ ಕೃತಿಯೊಂದನ್ನು ರಚಿಸಿದ್ದಾನೆಂದು ಉಲ್ಲೇಖಿಸುತ್ತಾರೆ. ಆದರೆ ಮೈಸೂರು ಅರಸರ ಕಾಲವನ್ನು ಗಮನಿಸಿದಾಗ ಶ್ರೀವೈಷ್ಣವ ಪರವಾದ ತಾತ್ವಿಕ ಮತ್ತು ಭಕ್ತಿ ಪರವಾದ ಸಾಹಿತ್ಯ ರಚನೆಗೆ ಹೆಚ್ಚು ಮಹತ್ವ ಬಂದಿರುವುದು ಕಾಣುತ್ತದೆ.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಶ್ರೀವೈಷ್ಣವ ಪರವಾದ ಅನೇಕ ಗ್ರಂಥಗಳು ರಚಿತವಾಗಿರುವುದು ಕಂಡುಬರುತ್ತದೆ. ಸ್ವತಃ ಚಿಕ್ಕದೇವರಾಜ ಒಡೆಯನೇ ಚಿಕ್ಕದೇವರಾಜ ಬಿನ್ನಪಂ ಮತ್ತು ಗೀತ-ಗೋಪಾಲವೆನ್ನುವ ಕೃತಿಯನ್ನು ರಚಿಸಿದನೆಂಬ ಪ್ರತೀತಿಯಿದೆ. "ಆದರೆ ಈ ಗ್ರಂಥಗಳೂ ತಿರುಮಲಾರ್ಯನಿಂದ ರಚಿತಗೊಂಡು ಚಿಕ್ಕದೇವರಾಜನಿಂದ ವಿರಚಿತವಾದವೆಂಬ ಹೆಸರನ್ನು ಪಡೆದಿರಬೇಕು. ಏಕೆಂದರೆ ಈ ಕೃತಿಗಳಲ್ಲಿ ಕಂಡುಬರುವ ಚಿಕ್ಕದೇವರಾಜನ ಸ್ತುತಿ. ಒಬ್ಬ ರಾಜ ತನ್ನಮಟ್ಟಿಗೆ ತಾನು ಇಷ್ಟು ಸ್ತುತಿ ಮಾಡಿಕೊಳ್ಳಲು ಸಾಧ್ಯವಿಲ್ಲ[1].

ಚಿಕ್ಕದೇವರಾಜ ಒಡೆಯನ ಕಾಲದಲ್ಲಿ ಶ್ರೀವೈಷ್ಣವ ಕವಿಗಳ ಒಂದು ದೊಡ್ಡ ಸಮೂಹವೇ ಕಾಣುತ್ತದೆ. ಇವನ ಮಂತ್ರಿಯಾದ ತಿರುಮಲಾರ್ಯ, ಸಿಂಗಿರಾರ್ಯ ಚಿಕುಪಾಧ್ಯಾಯ, ಹೆಳವನಕಟ್ಟೆ ಗಿರಿಯಮ್ಮ, ಸಂಚಿಯ ಹೊನ್ನಮ್ಮ ಮುಂತಾದವರನ್ನು ಈ ಸಮೂಹದಲ್ಲಿ ಗಮನಿಸಬಹುದು. ತಿರುಮಲಾರ್ಯನ ಪ್ರಭಾವದಿಂದಲೇ ಚಿಕ್ಕದೇವರಾಜನು ಶ್ರೀವೈಷ್ಣವನಾದನು ಎಂಬುದನ್ನು ಇತಿಹಾಸ ಹೇಳುತ್ತದೆ.

ಈ ಕಾಲದ ಬಹಳ ಪ್ರಮುಖವಾದ ಗ್ರಂಥ 'ಚಿಕ್ಕದೇವರಾಜ ಬಿನ್ನಪಂ' ಈ ಕೃತಿ ರಾಮಾನುಜರ ಸಿದ್ಧಾಂತದ ಮುಖ್ಯ ತತ್ವಗಳನ್ನು ತಿಳಿಸಿಕೊಡುವ ಮಹತ್ವದ ಕೃತಿ. ಮೇಲುಕೋಟೆಯ ಚೆಲುವನಾರಾಯಣ ಮುಂದೆ ವಿಜ್ಞಾಪಿಸಿಕೊಳ್ಳುವ ನಿರೂಪಣಾತಂತ್ರದ ಕೃತಿ. "ಶಾಸ್ತ್ರರೂಪವನ್ನು ಸಾಹಿತ್ಯ ರೂಪಕ್ಕೆ ಇಳಿಸಿದ ಭಕ್ತಿ ಜ್ಞಾನ ಸಂಮಿಶ್ರವಾದ ಗ್ರಂಥ"[2].

ಮತ್ತೊಂದು ಮುಖ್ಯ ಕೃತಿ ಗೀತ-ಗೋಪಾಲ. ಇದು ಭಕ್ತಿಗೀತ ಸಂಗ್ರಹ ಇದರಲ್ಲೂ ಸಹ ಶ್ರೀವೈಷ್ಣವ ತತ್ವದ ಭಕ್ತಿಯೇ ಹೊರಹೊಮ್ಮಿರುವುದನ್ನು ಕಾಣಬಹುದು. ಗೋಪಾಲಕನಾದ ಕೃಷ್ಣನ ಮೇಲಿನ ಭಕ್ತಿಯನ್ನು ತೋರಿಸುವ ಸಾಹಿತ್ಯವಿದು. ಶ್ರೀ ವೈಷ್ಣವ ಸಂಪ್ರದಾಯದ ಗೀತೆಗಳು ಸಿಗುವುದು ಇಲ್ಲಿಯೇ ಎನ್ನಬಹುದು. ಈ ಎರಡೂ ಕೃತಿಗಳು ಚಿಕ್ಕದೇವರಾಜನಿಂದಲೇ ರಚಿತವಾದುವೆಂಬ ಪ್ರತೀತಿ ಕಾರಣ ಎರಡೂ ಕೃತಿಗಳಲ್ಲೂ ಕಾಣುವುದು ನಿಷ್ಠಾವಂತ ಶ್ರೀ ವೈಷ್ಣವ ತತ್ವವೆನ್ನಬಹುದು. ಇದರ ಜೊತೆಯಲ್ಲಿಯೇ ರಚಿತವಾದ ತಿರುಮಲಾರ್ಯನ ಕೃತಿಗಳು ಸಹ ಇಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸುತ್ತವೆ. ಚಿಕ್ಕದೇವರಾಜ ವಿಜಯ, ಅಪ್ರತಿಮವೀರಚರಿತ, ಚಿಕ್ಕದೇವರಾಯವಂಶಾವಳಿ,

---

[1] ಕನ್ನಡ ಸಾಹಿತ್ಯ ಚರಿತ್ರೆ: ರಂ. ಶ್ರೀ ಮುಗಳಿ ಪು: 321

[2] ಕನ್ನಡ ಸಾಹಿತ್ಯ ಚರಿತ್ರೆ-ರಂ. ಶ್ರೀ ಮುಗಳಿ. ಪು- 322

ಚಿಕ್ಕದೇವರಾಯಶತಕ ಮುಂತಾದ ಕೃತಿಗಳು ತಿರುಮಲಾರ್ಯನಿಂದ ರಚಿತವಾಗಿರುವುವು. ಈ ಎಲ್ಲಾ ಕೃತಿಗಳೂ ಮೈಸೂರಿನ ರಾಜರ ಚರಿತ್ರೆಯನ್ನೂ ಒಳಗೊಂಡು ಕೆಲವು ಚಾರಿತ್ರಿಕ ಅಂಶಗಳನ್ನು ತಿಳಿಸಿಕೊಡುವ ಗ್ರಂಥಗಳು ಎನ್ನಬಹುದು.

ಈ ಕಾಲದ ಮತ್ತೊಬ್ಬ ಪ್ರಮುಖ ಕವಿ ಚಿಕುಪಾಧ್ಯಾಯ. ಇವನು ಸುಮಾರು 40 ಕ್ಕಿಂತ ಹೆಚ್ಚು ಸಂಖ್ಯೆಯ ಗ್ರಂಥಗಳನ್ನು ರಚಿಸಿದ್ದಾನೆ. "ಕನ್ನಡದಲ್ಲಿ ಇಷ್ಟು ಗ್ರಂಥಗಳನ್ನು ಬರೆದ ಕವಿ ಬೇರೊಬ್ಬರಿರಲಿಲ್ಲ.[1] ಈತ ತನ್ನ ಕೃತಿಗಳಲ್ಲಿ ಶ್ರೀವೈಷ್ಣವ ಮತದ ತತ್ತ್ವ, ಸಂಪ್ರದಾಯಗಳನ್ನು ಎತ್ತಿ ಹಿಡಿದಿರುವುದನ್ನು ಕಾಣಬಹುದು. ಅಲ್ಲದೇ ಇವನ ಕೃತಿಗಳು ಹೊಸ ಪ್ರಯತ್ನವನ್ನು ನಡೆಸಿವೆ ಎಂದರೆ ತಪ್ಪಾಗಲಾರದು. ರಾಮಾನುಜಾಚಾರ್ಯರ ಮತತತ್ತ್ವವನ್ನು ಚಂಪೂ ಗ್ರಂಥಗಳ ಮೂಲಕ ರಚಿಸುವ ಒಂದು ನವೀನ ಪ್ರಯೋಗ ಇವನು ಮಾಡುತ್ತಾನೆ ಎನ್ನಬಹುದು. ಇವನ ಕೆಲವು ಮುಖ್ಯವಾದ ಕೃತಿಗಳು ವಿಷ್ಣುಪುರಾಣ, ವೆಂಕಟಗಿರಿಮಹಾತ್ಮ್ಯ, ಶ್ರೀರಂಗಮಹಾತ್ಮ್ಯ, ಯದುಗಿರಿ ಮಹಾತ್ಮ್ಯ, ಶೃಂಗಾರ ಶತಕ ಇತ್ಯಾದಿ. ಹಾಗೆಯೇ ದಿವ್ಯಸೂರಿ ಚರಿತೆಯು ಹನ್ನೆರಡು ಆಳ್ವಾರರು, ರಾಮಾನುಜ ಚರಿತೆಯನ್ನು ಒಳಗೊಂಡು ರಚಿತವಾದ ಕಾವ್ಯಗ್ರಂಥ 'ಸಾತ್ತ್ವಿಕ ಬ್ರಹ್ಮ ವಿದ್ಯಾವಿಲಾಸವು' ಶ್ರೀ ವೈಷ್ಣವ ಮತತತ್ತ್ವವನ್ನು ಪ್ರತಿಪಾದಿಸುವ ಕೃತಿ ಎನ್ನಬಹುದು. ಇದೇ ರೀತಿಯಲ್ಲಿ ಕಾಣುವ ಮತ್ತೊಬ್ಬ ಶ್ರೀ ವೈಷ್ಣವ ಕವಿ ಸಿಂಗಿರಾರ್ಯ. ಈತನನ್ನು ಸಿಂಗಾರಾರ್ಯನೆಂದೂ ಕೆಲವರು ಕರೆಯುತ್ತಾರೆ. ಈತನ ಕೃತಿ ಮಿತ್ರಾವಿಂದ ಗೋವಿಂದವು ಕನ್ನಡದ ಮೊಟ್ಟಮೊದಲ ನಾಟಕ ಎಂದು ಪ್ರಸಿದ್ಧವಾಗಿರುವುದನ್ನು ಗಮನಿಸಬಹುದು. ಇದು ಶ್ರೀ ಹರ್ಷನ 'ರತ್ನಾವಳೀ, ನಾಟಕದ ಅನುವಾದ. ಈ ನಾಟಕದ ನಾಯಕನು ಶ್ರೀ ಕೃಷ್ಣನೇ. ಈತನ ಕೃತಿ ಸಾಮಾನ್ಯವಾದರೂ ಈತನು ಶಿಕ್ಷಣ ನೀಡಿದ ಶಿಷ್ಯೆ ಶ್ರೀವೈಷ್ಣವ ತತ್ತ್ವವನ್ನು ಅನುಸರಿಸಿ ಬರೆದ ಕೃತಿ, ಕನ್ನಡ ಸಾಹಿತ್ಯದಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ.

ಚಿಕ್ಕದೇವರಾಯನ ಊಳಿಗದಲ್ಲಿದ್ದ ಸಂಚಿಯ ಹೊನ್ನಮ್ಮನೇ ಈತನ ಶಿಷ್ಯೆ. ಈಕೆ ಶ್ರೀವೈಷ್ಣವಳಲ್ಲದಿದ್ದರೂ ಸಿಂಗರಾರ್ಯನ ಪ್ರಭಾವದಿಂದ ಶ್ರೀ ವೈಷ್ಣವ ಮತತತ್ತ್ವವನ್ನೆ ಅನುಸರಿಸಿ ಬರೆದ ನೀತಿಕಾವ್ಯ, ಹದಿಬದೆಯಧರ್ಮ. ಸ್ತ್ರೀಯಾದವಳು ಯಾವ ರೀತಿ ಇರಬೇಕೆಂಬುದನ್ನು, ಗಂಡನಿಗೆ ಸೇವೆಯನ್ನು ಮಾಡುತ್ತಾ ಹೇಗೆ ಸದ್ಗುಣೆಯಾಗಿ ಬಾಳಬೇಕೆಂಬುದನ್ನು ಈ ಕೃತಿ ಹೇಳುತ್ತಾ ಹೋಗುತ್ತದೆ. ಆದರೆ ಹೆಣ್ಣಿನ ಬಗ್ಗೆ ಬೆಳೆಯಿಸಿದ ಕೀಳು ಮನೋಧರ್ಮವನ್ನು ಖಂಡಿಸುತ್ತಾ ಹೆಣ್ಣನ್ನು ಯಾವ ರೀತಿ ನಡೆಸಿಕೊಳ್ಳಬೇಕೆಂದು ಈ ಕೃತಿ ಹೇಳುತ್ತಾ ಸಾಗುತ್ತದೆ. ಈಕೆ ಇಲ್ಲಿ ಸಾಧಿಸುವ ಎಲ್ಲಾ ಸ್ತ್ರೀ ನೀತಿಗಳೂ ಶ್ರೀವೈಷ್ಣವ ಸಂಸ್ಕೃತಿಯನ್ನು ಅನುಸರಿಸಿ ಬಂದಿರುವುದೇ ಈ ಕೃತಿಯ ವೈಶಿಷ್ಟ್ಯ ಎನ್ನಬಹುದು.

---

[1] ಕನ್ನಡ ಸಾಹಿತ್ಯ ಚರಿತ್ರೆ ಪು- 325

ಇದೇ ಕಾಲದಲ್ಲಿದ್ದಂತಹ ಮತ್ತೊಬ್ಬ ಪ್ರತಿಭಾವಂತ ಪ್ರಸಿದ್ಧ ಕವಯಿತ್ರಿ ಹೆಳವನಕಟ್ಟೆ ಗಿರಿಯಮ್ಮ. ಈಕೆ ಶ್ರೀವೈಷ್ಣವ ಪಂಥಕ್ಕೆ ಸೇರಿದ ಕೀರ್ತನಕಾರಳೂ ಹೌದು. ಕವಯಿತ್ರಿಯೂ ಹೌದು. ಈಕೆಯ ಬಗ್ಗೆ ಅನೇಕ ದಂತಕಥೆಗಳಿರುವುದನ್ನು ಕಾಣಬಹುದು. ಈಕೆ ವಿವಾಹಿತೆಯಾಗಿದ್ದರೂ ವೈರಾಗ್ಯಶೀಲಳಾಗಿ ಇದ್ದು, ಅನೇಕ ಪವಾಡಗಳನ್ನು ಮಾಡಿದ್ದಾಳೆಂದು ಹೇಳುತ್ತಾರೆ. ಹೆಳವನಕಟ್ಟೆ ರಂಗನಾಥನ ಭಕ್ತೆಯಾದ ಈಕೆ ಚಂದ್ರಹಾಸನಕಥೆ, ಸೀತಾಕಲ್ಯಾಣ, ಉದ್ದಾಲಕನ ಕಥೆ ಮತ್ತು ಭಕ್ತಿಯ ಹಾಡುಗಳನ್ನು ರಚಿಸಿದ್ದಾಳೆ. ಇವಳ ಕೀರ್ತನೆಗಳಲ್ಲಿ ಹೆಳವನ ಕಟ್ಟೆ ರಂಗ ಎಂಬ ಅಂಕಿತವಿದೆ. ಇವಳ ಈ ಕೀರ್ತನೆಗಳಲ್ಲಿ ಕಾಣುವುದು ಶ್ರೀವೈಷ್ಣವ ಆನುಭಾವಿಕ ಮನೋಧರ್ಮವೆನ್ನಬಹುದು.

## ಆ) ಆಧುನಿಕ ಯುಗ

ಮುಂದೆ 1920 ನೇ ಶತಮಾನಗಳಲ್ಲಿ ಅಂದರೆ ಆಧುನಿಕ ಪರಂಪರೆಯಲ್ಲಿ ಮತದ ತತ್ವಜ್ಞ ಆಧಾರದ ಮೇಲೆ ಕೃತಿ ನಿರ್ಮಾಣವಾಗದಿದ್ದರೂ, ಈ ಸಂಸ್ಕೃತಿಯ ಮಿಳಿತವಾದ ಕೃತಿ ನಿರ್ಮಾಣವನ್ನು ಗಮನಿಸಬಹುದು. ಈ ಆಧುನಿಕ ಪರಂಪರೆ ಒಂದು ಕಡೆ ಆಧುನಿಕ ಸಾಹಿತ್ಯಕ್ಕೆ ಪ್ರಾಮುಖ್ಯವನ್ನು ನೀಡಿ ಹೊಸ ಹೊಸ ಪ್ರಕಾರಗಳನ್ನು ಒಳಗೊಂಡರೆ, ಮತ್ತೊಂದು ಕಡೆ ಹಳಗನ್ನಡ ಕೃತಿಗಳನ್ನು ಸಂಪಾದಿಸುವ ಕಾರ್ಯವನ್ನು ಕೈಗೊಂಡಿತು. ಹೀಗೆ ಎರಡು ದಿಕ್ಕಿನಿಂದಲೂ ಪ್ರಾರಂಭವಾದ ದೇಶೀಯ ಸಂಸ್ಕೃತಿಯ ಸೇವೆಗೆ ಅನೇಕ ಶ್ರೀವೈಷ್ಣವರು ತಮ್ಮದೇ ಆದ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಇಲ್ಲಿ ನೀಡಬೇಕಾಗಿರುವ ಅಥವಾ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಶ್ರೀವೈಷ್ಣವರ ಮನೆ ಮಾತು ತಮಿಳಾದರೂ ಅವರೆಲ್ಲಾ ಕನ್ನಡದಲ್ಲಿ ರಚನೆ ಮಾಡಿರುವುದು.

ಆಧುನಿಕ ಪರಂಪರೆಯ ಆರಂಭಕಾಲದ ಗ್ರಂಥ ಸಂಪಾದನೆಯ ಕಾರ್ಯದಲ್ಲಿ ಎಸ್.ಜಿ. ನರಸಿಂಹಾಚಾರ್ಯರು, ಡಿ.ಎಲ್. ನರಸಿಂಹಾಚಾರ್, ಆರ್.ನರಸಿಂಹಾಚಾರ್, ಎಂ.ಎ. ರಾಮಾನುಜ ಅಯ್ಯಂಗಾರ್, ಎನ್ ಅನಂತರಂಗಾಚಾರ್, ಶ್ರೀನಿವಾಸ್ ಅಯ್ಯಂಗಾರ್ ಮುಂತಾದವರು ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು, ಹಳಗನ್ನಡ ಸಾಹಿತ್ಯಕ್ಕೆ ಒಂದು ನೆಲೆಗಟ್ಟನ್ನು ಕಲ್ಪಿಸಿಕೊಟ್ಟರು. ಹಾಗೇಯೇ ಸಾಹಿತ್ಯ ಕ್ಷೇತ್ರದಲ್ಲೂ ಮಾಸ್ತಿ, ಪು.ತಿ.ನ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಜಿ.ಪಿ.ರಾಜರತ್ನಂ ಮುಂತಾದವರು ತಮ್ಮದೇ ಆದ ವಿಶೇಷ ಕೊಡುಗೆಯನ್ನು ನೀಡಿದರು.

ಕರ್ನಾಟಕದಲ್ಲಿ ಗ್ರಂಥ ಸಂಪಾದನ ಕಾರ್ಯ ಪ್ರಾರಂಭವಾದದ್ದು ಹತ್ತೊಂಭತ್ತನೇ ಶತಮಾನದ ಮಧ್ಯಭಾಗದಲ್ಲಿ ಎನ್ನಬಹುದು. ಈ ಕಾಲದಲ್ಲಿ ಆರಂಭವಾದ ಈ ಕಾರ್ಯದಲ್ಲಿ ಗ್ರಂಥ ಸಂಪಾದಕರ ಪ್ರಮುಖ ಸಾಲಿನಲ್ಲಿ ನಿಲ್ಲುವವರು ಎಸ್.ಜಿ.ನ ಮತ್ತು ಎಂ.ಎ. ರಾಮಾನುಜಯ್ಯಂಗಾರ್ಯರು. ಈ ಗ್ರಂಥ ಸಂಪಾದನೆಯ ಕಾರ್ಯದಲ್ಲಿ ಇವರ ಪಾತ್ರ ಬಹಳ ಹಿರಿದಾದದ್ದು, ಇವರಿಬ್ಬರೂ ಸೇರಿ ಸಂಪಾದಿಸಿ,

ಹೊರತಂದ ಕೃತಿಗಳು ಹಲವಾರು. 'ಕರ್ನಾಟಕ ಕಾವ್ಯಮಂಜರಿ ಮಾಲೆ'ಯಲ್ಲಿ ಎರಡನೆಯ ಗ್ರಂಥವಾಗಿ ಹೊರತಂದ ಹಳಗನ್ನಡ ಕಾವ್ಯ ಆಂಡಯ್ಯನ 'ಕಬ್ಬಿಗರ ಕಾವ'. ನಂತರ ಇವರ ಮಹತ್ಸಾಧನೆ ರನ್ನ ಕವಿಯ ಗದಾಯುದ್ಧವನ್ನು ಸಂಪಾದಿಸಿ ಹೊರತಂದದ್ದು. ಆ ವರ್ಷವೇ ನಾಗಚಂದ್ರನ ಮಲ್ಲಿನಾಥಪುರಾಣವನ್ನು ಸಂಪಾದಿಸಿ ಹೊರತಂದದ್ದು, ಇವೆರಡೂ ಕೃತಿಗಳೂ 1895 ರಲ್ಲಿ ಪ್ರಕಟವಾದವು. ಹಾಗೇಯೇ ಕರ್ನಾಟಕ ಕಾವ್ಯ ಮಾಲಿಕೆಯ ಮೂಲಕ ಹಲವಾರು ಸಣ್ಣ ಕೃತಿಗಳು, ನಿಘಂಟುಗಳೂ ಹೊರಬಂದವು. ಮುಂದೆ ಕಾವ್ಯಮಂಜರಿಯ ಮೂಲಕ ಅಪ್ರತಿಮ ವೀರಚರಿತೆ, ಉದಯಾದಿತ್ಯಾಲಂಕಾರ, ಶೃಂಗಾರ ರತ್ನಾಕರ, ಶಬ್ದಸ್ಮೃತಿ ಅಭಿನವದಶಕುಮಾರ ಚರಿತೆ, ಗಿರಿಜಾಕಲ್ಯಾಣ ಮುಂತಾದ ಗ್ರಂಥಗಳನ್ನು ಸಂಪಾದಿಸಿ, ಪರಿಷ್ಕರಿಸಿ, ಟಿಪ್ಪಣಿಯ ಸಮೇತ ಹೊರತಂದ ಕೀರ್ತಿ ಈ ಇಬ್ಬರೂ ಮಹನೀಯರಿಗೂ ಸಲ್ಲುತ್ತದೆ. ಇವರಿಬ್ಬರೂ ಕನ್ನಡ ಸಾಹಿತ್ಯ ಕ್ಷೇತ್ರದ ಕವಿಗಳ ಕೃತಿಗಳ ಸಂಪಾದನೆಯ ಮೂಲಕ ಪ್ರಾಚೀನಕಾವ್ಯ ಪರಂಪರೆಗೆ ಮರೆಯಲಾರದ ಕಾಣಿಕೆಯುನ್ನು ನೀಡಿದ್ದಾರೆ.

ಈ ಕ್ಷೇತ್ರಕ್ಕೆ ತನ್ನದೇ ವಿಶೇಷ ಕೊಡುಗೆಯನ್ನು ನೀಡಿದ ಮತ್ತೊಬ್ಬ ಮಹನೀಯರು ಡಿ.ಎಲ್.ಎನ್. ರವರು, ಸುಮಾರು ಅರ್ಧಶತಮಾನ ಕನ್ನಡ ಅಧ್ಯಯನಕ್ಕೆ ಅನುಕೂಲವಾಗುವ ಅನೇಕ ಗ್ರಂಥಗಳನ್ನು ನೀಡಿರುವ ಕೀರ್ತಿ ಇವರಿಗೆ ಸಲ್ಲುತ್ತದೆ ಎನ್ನಬಹುದು. ಕುಮಾರವ್ಯಾಸನ ಭೀಷ್ಮಪರ್ವ, ಶಬ್ದಮಣಿದರ್ಪಣಂ, ಪಂಪರಾಮಾಯಣ ಸಂಗ್ರಹ, ರಾಘವಾಂಕನ ಸಿದ್ಧರಾಮ ಚಾರಿತ್ರ ಮುಂತಾದವು ಇವರು ಹೊರತಂದ ಕೃತಿಗಳು. ಇವರ ಪೀಠಿಕೆಗಳು ಲೇಖನಗಳು ಕೃತಿ ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಸ್ಥಾನವನ್ನು ಪಡೆದಿದೆ. ಇವರ ಕನ್ನಡ ಗ್ರಂಥ ಸಂಪಾದನೆ, ಶಬ್ದವಿಹಾರ, ಹಂಪೆಯ ಹರಿಹರ, ಪಂಪಭಾರತ ದೀಪಿಕೆ ಮೊದಲಾದ ಕೃತಿಗಳು. 'ನಭೂತೋ ನ ಭವಿಷ್ಯತಿ' ಎಂಬತಹ ಕೃತಿಗಳು.

ಈ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಮತ್ತೊಬ್ಬ ಆಚಾರ್ಯರು ಆರ್. ನರಸಿಂಹಾಚಾರ್ಯರು. ಇವರು ಮಂಡ್ಯ ಜಿಲ್ಲೆಯಲ್ಲಿ ಶ್ರಿವೈಷ್ಣವ ಕುಟುಂಬದಲ್ಲಿ ಜನಿಸಿದವರು. ಇವರು ಉಪಾಧ್ಯಾಯ ವೃತ್ತಿಯನ್ನು ಕೈಗೊಂಡು ನಂತರ ಪುರಾತತ್ವ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು. ಇವರು ಶ್ರೇಷ್ಠ ಸಂಶೋಧಕರು ಮಾತ್ರವಲ್ಲದೇ ಭಾಷಾಂತರಕಾರರು, ಶಾಸನತಜ್ಞರು, ನಾಣ್ಯಶಾಸ್ತ್ರ ಪ್ರವೀಣರು, ಕಲಾಭಿಜ್ಞರು, ಗ್ರಂಥಕರ್ತರು ಆಗಿ ಪ್ರಸಿದ್ಧಿಯನ್ನು ಪಡೆದವರು. ಇವರು ಪುರಾತತ್ವ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವಾಗ ಇವರ ನೇತೃತ್ವದಲ್ಲಿ ವಿವಿಧ ಭಾಷೆಯ ಐದು ಸಾವಿರ ಶಾಸನಗಳು, ನಾಲ್ಕು ಸಾವಿರ ನಾಣ್ಯಗಳು ಸಂಶೋಧಿತವಾಗಿ ಪ್ರಸಿದ್ಧಿಯನ್ನು ಪಡೆದರೆ ನೂರು ಕನ್ನಡ – ಸಂಸ್ಕೃತ ಗ್ರಂಥಗಳು ಪ್ರತಿಮಾಡಲ್ಪಟ್ಟು ಹೆಸರನ್ನು ಪಡೆದವು. ಇವರು ರಚಿಸಿದ ಕೃತಿಗಳು ನೀತಿವಾಕ್ಯ ಮಂಜರಿ, ನೀತಿಮಂಜರಿ ಮುಂತಾದವನ್ನು ಪುರಾಣಗ್ರಂಥಗಳ ಆಧಾರದಿಂದ ರಚಿತವಾಗಿರುವುದು. 'ನಗೆಗಡಲು' ಎನ್ನುವ ಹಾಸ್ಯ ಕಥೆ ಮುಂದಿನ

ಹಾಸ್ಯ ಲೇಖನ, ಕತೆಗಳಿಗೆ ಅಡಿಪಾಯವಾಯಿತು ಎನ್ನುವುದು ಆಧುನಿಕ ಸಾಹಿತಿಗಳ ನಿಲುವು. ಹಾಗೆಯೇ ಇವರು ಸಂಪಾದಿಸಿದ ಗ್ರಂಥಗಳು 'ಕಾವ್ಯಾವಲೋಕನ' 'ಕರ್ಣಾಟಕ ಭಾಷಾ ಭೂಷಣ', 'ಶಾಸನಪದ್ಯಮಂಜರಿ' ಮುಂತಾದವು. ಇವೆಲ್ಲಕ್ಕಿಂತಾ ಮುಖ್ಯವಾದ ಮಹತ್ತರವಾದ ಕೃತಿ "ಕರ್ಣಾಟಕ ಕವಿಚರಿತೆ' ಈ ಗ್ರಂಥ ಅವರ ಸಂಪೂರ್ಣ ಜೀವನದ ದುಡಿಮೆಯ ಫಲ. ಮೂರು ಸಂಪುಟಗಳಲ್ಲಿ ಪ್ರಕಟವಾದ ಈ ಗ್ರಂಥವು 1148 ಕವಿಗಳು ಹಾಗೂ ಐದು ಸಾವಿರ ಗ್ರಂಥಗಳ ವಿಮರ್ಶೆಯನ್ನು ಒಳಗೊಂಡಿದೆ. ಈ ರೀತಿಯ ಸಾಧನೆ ಮಾಡಿದ ಮತ್ತೊಬ್ಬ ವ್ಯಕ್ತಿಯನ್ನು ಸಾಹಿತ್ಯ ಕ್ಷೇತ್ರದಲ್ಲಿ ನಾವು ಗಮನಿಸಲು ಸಾಧ್ಯವೇ ಇಲ್ಲ ಎನ್ನಬಹುದು. ಈ ಕವಿಗಳ ಚರಿತ್ರೆ ಹೀಗೆ ನಿರೂಪಿತವಾಗಿದೆಯೆಂದು ಇವರೇ ತಮ್ಮ ಪ್ರಥಮ ಸಂಪುಟದ ಅವತರಣಿಕೆಯಲ್ಲಿ ತಿಳಿಸುತ್ತಾರೆ. ಕನ್ನಡ ನುಡಿಯ ಇತಿಹಾಸದಲ್ಲಿ ಎಂದೂ ಆಗದಿರುವ ಕಾರ್ಯವನ್ನು ಕೈಗೊಂಡು ಯಶಸ್ವಿಯಾದವರು ಈ ಮಹನೀಯರು. ಕನ್ನಡ ಗ್ರಂಥಗಳಲ್ಲದೆ, ಇಂಗ್ಲಿಷ್ ಭಾಷೆಯಲ್ಲಿಯೂ, ಸಂಸ್ಕೃತದಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿದ ಕೀರ್ತಿ ಇವರದು. "ಕನ್ನಡದ ಸುಪ್ರಸಿದ್ಧ ಕಾವ್ಯಗಳನ್ನು ಬರೆದ ರನ್ನ, ಪೊನ್ನ, ಜನ್ನರು ಹಿಂದಿನ ರತ್ನತ್ರಯರಾದರೆ ಕನ್ನಡ ಸಾಹಿತ್ಯ ಪ್ರಕಾಶನಕ್ಕಾಗಿ ದುಡಿದ ಎಂ.ಎ. ರಾಮಾನುಜ ಅಯ್ಯಂಗಾರ್ಯರು, ಎಸ್.ಜಿ. ನರಸಿಂಹಾಚಾರ್ಯರು, ಆರ್. ನರಸಿಂಹಾಚಾರ್ಯರು ಇಂದಿನ ರತ್ನತ್ರಯರು" ಎನ್ನುವ ಬಿ.ಎಂ. ಶ್ರೀಯವರ ಹೊಗಳಿಕೆ ಗ್ರಂಥ ಸಂಪಾದನೆಯಲ್ಲಿ, ಸಂಶೋಧನೆಯಲ್ಲಿ ಈ ಮೂವರು ಮಹನೀಯರು ನಡೆಯಿಸಿದ ಕಾರ್ಯ ಎಂತಹುದು ಎನ್ನುವುದು ಮನದಟ್ಟಾಗುತ್ತದೆ. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯ ಕೃತಿಗಳನ್ನು ಭದ್ರವಾಗಿ ನಿಲ್ಲಿಸಲು ಈ ಮಹನೀಯರು ಸಾಧಿಸಿದ ಈ ಸೇವೆಯೇ ಎಲ್ಲರಿಗೂ ಅನುಕರಣಪ್ರಾಯವಾಗಿದೆ.

ಗ್ರಂಥ ಸಂಪಾದನಾ ಶಾಸ್ತ್ರದಲ್ಲಿ ಅನೇಕ ಮಹನೀಯರು ಸಾಧನೆ ಮಾಡಿದಂತೆಯೇ ಕನ್ನಡ ಆಧುನಿಕ ಸಾಹಿತ್ಯದಲ್ಲಿ ಅನೇಕ ಸಾಹಿತಿಗಳು ತಮ್ಮ ಅಪೂರ್ವ ಕೊಡುಗೆಯನ್ನು ನೀಡಿದ್ದಾರೆ. ಇವರಲ್ಲಿ ಮಾಸ್ತಿ, ಪು.ತಿ.ನ. ಜಿ.ಪಿ. ರಾಜರತ್ನಂ ಗೊರೂರು ರಾಮಸ್ವಾಮಿ ಅಯ್ಯಂಗಾರರು ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ಆಧುನಿಕ ಸಾಹಿತ್ಯದ ಎಲ್ಲಾ ಅಂಶಗಳನ್ನೂ ಒಳಗೊಂಡು ಸಮೃದ್ಧಿಯಾದ ಸಾಹಿತ್ಯ ಶ್ರೀವೈಷ್ಣವ ಸಾಹಿತಿಗಳಿಂದ ಮೂಡಿಬಂತು. ಈ ಎಲ್ಲಾ ಸಾಹಿತಿಗಳ ರಚನೆಗಳನ್ನು ಗಮನಿಸಿದಾಗ ಎಲ್ಲದರಲ್ಲೂ ಒಂದು ಸಂಸ್ಕೃತಿಯ ಸಮ್ಮೇಳನವನ್ನು ಕಾಣಬಹುದು. ಈ ಸಂಸ್ಕೃತಿಯ ಜೊತೆಗೆ ತಾವು ಬೆಳೆದ ಬಂದ ಪರಿಸರವನ್ನು ಇವುಗಳಲ್ಲಿ ಅಡಗಿಸಿಟ್ಟುಕೊಳ್ಳುವ ಕ್ರಮವನ್ನು ನೋಡಬಹುದು. ಇವರೆಲ್ಲರ ಜೊತೆಗೆ ಸಾಂಸ್ಕೃತಿಕ ಪರಂಪರೆಯು ಬೆಸುಗೆ ಹಾಕಿಕೊಂಡಿದೆ. ತಮ್ಮ ಕೃತಿಗಳ ಮೂಲಕ ಬಿಂಬಿಸುವ ಸಂಸ್ಕೃತಿಯ ಜೊತೆಯೇ ಆಧುನಿಕ ಜೀವನದ ಬದುಕಿನ ಮೌಲ್ಯಗಳನ್ನು ನೀಡುವ ಅಭಿರುಚಿ ಎನ್ನಬಹುದು.

ಈ ವಿಶಿಷ್ಟ ಅಭಿರುಚಿಯೇ ಮಾಸ್ತಿಯವರ ಸಾಹಿತ್ಯ ಬದುಕಿಗೆ ಒಂದು ಒಳ್ಳೆಯ ಅಡಿಪಾಯ ಎನ್ನಬಹುದು. ಈ ಅಭಿರುಚಿಯೇ ಅವರು ಜ್ಞಾನಪೀಠಕ್ಕೆ ಭಾಜನವಾಗುವಂತಹ ಕಾರ್ಯಕ್ಕೆ ಎಡೆಮಾಡಿಕೊಟ್ಟಿತು ಎನ್ನಬಹುದು. ಮಾಸ್ತಿಯವರು ಶ್ರೀವೈಷ್ಣವ ಪೆರಿಯ ಕುಟುಂಬದಲ್ಲಿ ಅಂದರೆ ದೊಡ್ಡ ಕುಟುಂಬದಲ್ಲಿ ಜನಿಸಿದವರು. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ರಚನೆ ಮಾಡಿದ್ದಾರೆ. ಇವರು ಸಣ್ಣಕತೆಗೆ "ಒಂದು ಭದ್ರವಾದ ಅಡಿಪಾಯವನ್ನು ಹಾಕಿಕೊಟ್ಟು ಸಣ್ಣ ಕತೆಗಳ ಜನಕ ಎಂದೇ ಹೆಸರು ಪಡೆದವರು. ಒಂದು ಸಾಹಿತ್ಯ ಕಲೆಯಾಗಿಯೇ ಉಳಿದು ಜೀವನವನ್ನು ಸಾರ್ಥಕಗೊಳಿಸಿದಾಗ ಮಾತ್ರ ಅದು ಒಂದು ನಾಡಿನ ಸಂಸ್ಕೃತಿಯ ಸತ್ವವಾಗಿ ಬಾಳಬಲ್ಲದು. ಇವರ ಸಾಹಿತ್ಯಕ ಮನೋಭಾವದಲ್ಲಿ ಈ ಸಮತೂಕ ಹಾಸುಹೊಕ್ಕಾಗಿದೆ. ಹೊಸಗನ್ನಡ ನವೋದಯ ಕಾಲದಲ್ಲಿ ಎಲ್ಲಾ ಲೇಖಕರೂ ಭಾವೋದ್ವೇಗದ ಕಾವಿನಲ್ಲಿಯೇ ಸಾಹಿತ್ಯವನ್ನು ಸೃಷ್ಟಿಸುತ್ತಿದ್ದಾಗ ಶ್ರೀನಿವಾಸರೊಬ್ಬರು ಸ್ವಸ್ಥಚಿತ್ರದ ಲೇಖಕರಾಗಿರುವುದು ಭಾವನೆಯ ಸೆಳೆತಕ್ಕೆ ಸಿಕ್ಕದೇ, ಅದನ್ನು ಜೀವನದ ಒಂದು ಪ್ರಬಲ ಶಕ್ತಿಯೆಂದು ಪರಿಗಣಿಸಿರುವುದು ಅವರ ಸಾಹಿತ್ಯದ ಹಿರಿಮೆಯ ರಹಸ್ಯ".[1] ಇದು ಮಾಸ್ತಿಯವರ ಸಾಹಿತ್ಯದ ಬಗ್ಗೆ ಇರುವಂತಹ ನಿಲುವು. ಕಥಾ ಕ್ಷೇತ್ರದಲ್ಲಿ ಮಾತ್ರ ಇವರು ತಮ್ಮ ಸಿದ್ಧಿಯನ್ನು ತೋರಿಸಲಿಲ್ಲ. ಕಾವ್ಯ, ನಾಟಕ, ಕಾದಂಬರಿ, ಪ್ರಬಂಧ, ವಿಮರ್ಶೆ ಮುಂತಾದ ಕ್ಷೇತ್ರಗಳಲ್ಲೂ ಗಣನೀಯ ಪಾತ್ರವನ್ನು ವಹಿಸಿದ್ದಾರೆ. ಉನ್ನತವಾದ ಹುದ್ದೆಯನ್ನು ನಿರ್ವಹಿಸುತ್ತಲೇ ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ನೀಡಿದ್ದಾರೆ. ಇದರ ಜೊತೆಗೆ ಅವರು ಅಪ್ಪಟ ದೈವಭಕ್ತ, ಎಲ್ಲೂ ತಮ್ಮ ಆಸ್ತಿಕತನವನ್ನು ಬಿಟ್ಟುಕೊಟ್ಟಿಲ್ಲ. ಮಾಡುವುದು ನಮ್ಮ ಕೆಲಸ ಮುಂದಿನದು ದೇವರ ಚಿತ್ತ ಇದು ಅವರ ಜೀವನ ಸೂತ್ರ. ಆದರಿಂದಲೇ ಇವರನ್ನು ಪರಮ ಭಾಗವತರೆಂದೇ ಬಣ್ಣಿಸುತ್ತಾರೆ. ಇವರು ತಮ್ಮ ಪರಂಪರೆಯ ಸಂಸ್ಕೃತಿಗೆ ನೀಡಿದ ಕೊಡುಗೆಯೆಂದರೆ "ವಿಮರ್ಶೆ ನಾಲ್ಕು". ಇದರಲ್ಲಿ ಪ್ರಕಟವಾದ ತಮಿಳು ವೈಷ್ಣವ ಪ್ರಬಂಧಗಳು ಹನ್ನೆರಡು ಆಳ್ವಾರರು ಮತ್ತು ಇಬ್ಬರೂ ಆಚಾರ್ಯರುಗಳ ಜೀವನ ಕೃತಿಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತಾ ಸಾಗುತ್ತದೆ. ಹಾಗೆಯೇ ಇವರ 'ಭಟ್ಟರ ಮಗಳು' ನಾಟಕದ ಕೆಲವು ಅಂಶಗಳು ಗೋದಾದೇವಿಯ ಚರಿತ್ರೆಯನ್ನು ನೆನಪಿಸುತ್ತದೆ. ಹಾಗೆಯೇ ಇವರ 'ತಿರುಪಾಣಿ' ನಾಟಕ ಆಳ್ವಾರರನ್ನು ಕುರಿತೇ ರಚಿಸಿರುವ ನಾಟಕ. ಹಾಗೆಯೇ ಇವರ ಕತೆಗಳಲ್ಲಿ ಮೂಡಿರುವ ಸಾಮಾನ್ಯ ವ್ಯಕ್ತಿಗಳ ಚಿತ್ರಣದಲ್ಲಿ ಇವರು ಕಂಡುಕೊಳ್ಳುವುದು, ಮೆಚ್ಚಿಕೊಳ್ಳುವುದು ಅಲ್ಲಿರುವಂತಹ ಸಣ್ಣ ಸಣ್ಣ ಆದರ್ಶ ಗುಣಗಳನ್ನು.

ಇದೇ ರೀತಿಯಲ್ಲಿಯೇ ಕನ್ನಡ ಸಾಹಿತ್ಯ ಪ್ರವಾಹಕ್ಕೆ ಮಾರ್ಗತೋರಿಸಿದವರು ಜಿ.ಪಿ. ರಾಜರತ್ನಂ, ಇವರು ತಮ್ಮ ವಿಶಿಷ್ಟ ಕಾವ್ಯ ಶೈಲಿಯಿಂದಲೇ ಗಮನ ಸೆಳೆದ ಕವಿಗಳು 'ಯಂಡ್ಕುಡುಕ ರತ್ನ'ನ ಬಾಯಿಯಿಂದ ವಿಶೇಷ ಕನ್ನಡ ಪ್ರೇಮವನ್ನು ಹೊರಡಿಸಿ, ಜಗತ್ತಿನ ಸುಖ-ದುಃಖಗಳನ್ನು ಇವನ ಮೂಲಕ ಅರಳಿಸಿ, ಈ ಜಗತ್ತಿನ ಜೊತೆಗೆ ಇನ್ನೊಂದು ಜಗತ್ತಿನ ನಂಟು ಇದೆ ಎಂಬುದನ್ನು ಕನ್ನಡಿಗರಿಗೆ

---

[1] ಯುಗಧರ್ಮ ಮತ್ತು ಸಾಹಿತ್ಯ ದರ್ಶನಃ ಕೆ.ಡಿ. ಕುರ್ತುಕೋಟಿ, ವಿಶ್ವಕನ್ನಡ ಸಮ್ಮೇಳನ 1983

ಪರಿಚಯಿಸಿದ ಶ್ರೇಷ್ಠ ಸಾಹಿತಿ. ಇತರ ಸಾಹಿತಿಗಳಿಗಿಂತ ವಿಭಿನ್ನರಾಗಿ ನಿಲ್ಲುವುದು ಇವರ ಸರ್ವಧರ್ಮಗಳ ಸಮನ್ವಯ ನೀತಿ. ಜಗತ್ತಿನ ಎಲ್ಲಾ ಧರ್ಮಗಳ ಪರಂಪರೆಯನ್ನು ಆಳವಾಗಿ ಅಭ್ಯಸಿಸಿದ ಇವರಿಗೆ ಬೌದ್ಧಧರ್ಮ, ಜೈನಧರ್ಮಗಳು ತಮ್ಮದೇ ಆದ ಪ್ರಭಾವವನ್ನು ಬೀರಿದ ಅಂಶಗಳು ಮನದಟ್ಟಾಗುತ್ತದೆ. ಆ ಧರ್ಮಗಳ ಬಗ್ಗೆಯೇ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಈ ಧರ್ಮಗಳ ಜೊತೆಯಲ್ಲಿ ತಾನು ಹುಟ್ಟಿನಿಂದ ಪಡೆದ ತನ್ನ ಧರ್ಮದ ಸಂಸ್ಕೃತಿಯನ್ನು ಕುರಿತು ಕೆಲವು ಲೇಖನಗಳನ್ನು ಬರೆಯುತ್ತಾರೆ. ಹಾಗೆಯೇ ಅನೇಕ ಕೃತಿಗಳನ್ನು ಸಂಪಾದಿಸಿ ಅದನ್ನು ಕೃತಿ ರೂಪದಲ್ಲಿ ಹೊರತರುವ ಕಾರ್ಯವನ್ನು ಮಾಡಿದ್ದಾರೆ. 'ಚಿಕ್ಕದೇವರಾಜ ಬಿನ್ನಪಂ" ಕೃತಿಯನ್ನು ಹಳಗನ್ನಡದಿಂದ ಹೊಸಗನ್ನಡಕ್ಕೆ ಅನುವಾದಿಸಿದ ಕೀರ್ತಿ ಇವರದು. ಹಾಗೆಯೇ ಎನ್.ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್ ಸ್ಮಾರಕ ಪುಸ್ತಕ ಮಾಲೆಯಿಂದ ಹನ್ನೆರಡು ಪುಸ್ತಕಗಳನ್ನು, ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಿಂದ ಆರು ಪುಸ್ತಕಗಳು, ಜಿ.ಪಿ. ಗೋಪಾಲಕೃಷ್ಣಾಯ್ಯಂಗಾರ್ಯ ಸ್ಮಾರಕ ಪುಸ್ತಕ ಮಾಲೆಯಿಂದ ಹದಿಮೂರು ಪುಸ್ತಕಗಳನ್ನು ಸಂಪಾದಿಸಿ ಪ್ರಕಟಪಡಿಸಿರುವುದನ್ನು ಕಾಣಬಹುದು.

ಗೊರೊರು ರಾಮಸ್ವಾಮಿ ಅಯ್ಯಂಗಾರರು ಸಹಾ ಸುಪ್ರಸಿದ್ಧ ಲೇಖಕರಲ್ಲಿ ಒಬ್ಬರು. ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ಕನ್ನಡ ಸಾಹಿತ್ಯದಲ್ಲಿ ಇವರ 'ಅಮೇರಿಕದಲ್ಲಿ ಗೊರೂರು' ಎಂಬ ಪ್ರವಾಸ ಕಥನ ಬಹಳ ಪ್ರಸಿದ್ಧಿಯನ್ನು ಪಡೆದಿದೆ. ಹಾಗೆಯೇ ಇವರ 'ನಮ್ಮ ಊರಿನ ರಸಿಕರು' ಮೊದಲಾದ ಪ್ರಬಂಧಗಳು ಪ್ರಸಿದ್ಧವಾಗಿದೆ.

ಇದೇ ಸಾಲಿನಲ್ಲಿ ಕಂಡು ಬರುವ ಅತ್ಯಂತ ಪ್ರತಿಭಾನ್ವಿತ ಪರಮಭಾಗವತರೆಂದು ಖ್ಯಾತರಾಗಿರುವ ಸಾಹಿತಿ ಪು.ತಿ.ನರಸಿಂಹಾಚಾರ್ಯರು, ಮೇಲುಕೋಟೆಯ ಒಂದು ಸಂಸ್ಕೃತಿಯ ಗಟ್ಟಿ ಆವರಣದಲ್ಲಿ ಬೆಳೆದು ಬಂದ ಕವಿ ಇವರು. ಬೇರೆ ಶ್ರೀವೈಷ್ಣವ ಸಾಹಿತಿಗಳಿಗೆ ಹೋಲಿಸಿದರೆ ಸ್ವಲ್ಪ ಹೆಚ್ಚಾಗಿಯೇ ಸಂಸ್ಕೃತಿಯ ಉಸಿರನ್ನು ಪಡೆದವರು ಇವರು. ಈ ಸಂಸ್ಕೃತಿಯ ಸಿದ್ಧಾಂತದ ಜೊತೆಯಲ್ಲಿಯೇ ಆಧುನಿಕತೆಯ ಸಿದ್ಧಾಂತವನ್ನು ಒಳಗೂಡಿಸಿಕೊಂಡು, ಒಂದು ಹೊಸ ರುಚಿಯನ್ನು ನೀಡುವಂತ ಸಮೃದ್ಧ ಸಾಹಿತ್ಯವನ್ನು ರಚಿಸಿ ಕನ್ನಡ ಸಾಹಿತ್ಯ ಭಂಡಾರದ ಕೀರ್ತಿಯನ್ನು ಹೆಚ್ಚಿಸಿದ ಮಹನೀಯರು ಪು.ತಿ.ನ. ಸಾಹಿತ್ಯ ಕ್ಷೇತ್ರದ ಕಾವ್ಯ, ಮಹಾಕಾವ್ಯ, ನಾಟಕ, ವಿಮರ್ಶೆ, ಪ್ರಬಂಧಗಳ ಪ್ರಕಾರಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿದ ಇವರಿಗೆ ವಿಶಿಷ್ಟಾದ್ವೈತ ಒಂದು ಮೂಲ ನೆಲೆ. ಈ ಸಿದ್ಧಾಂತ ನೆಲೆಗಳೇ ಇವರ ಸಾಹಿತ್ಯದ ಕಲ್ಪನೆಗೆ ಸ್ಫೂರ್ತಿ ಎನ್ನಬಹುದು ಕನ್ನಡಕ್ಕೆ ಗೀತ ನಾಟಕಗಳನ್ನು ಸಮರ್ಪಿಸಿದ ಕವಿ. ಹಿಂದಿನಿಂದ ಬಂದಂತಹ ಕೃಷ್ಣಭಕ್ತಿ ಈ ಕವಿಯ ಕೃತಿಗಳಲ್ಲಿ ಪರಿಪೂರ್ಣತೆಯನ್ನು ಪಡೆದಿರುವುದು ಒಂದು ವಿಶೇಷವೆ. ಆಧುನಿಕ ಜಗತ್ತಿನಲ್ಲಿ ಆಧುನಿಕ ರೀತಿಯಲ್ಲಿ ಯೋಚಿಸುತ್ತಾ ಹಳೆಯ ಪರಂಪರೆಯನ್ನು ನಿರಾಕರಿಸುವ ಆಧುನಿಕರಿಗೆ ಪು.ತಿ.ನ ಮತ್ತು ಅವರ ಸಾಹಿತ್ಯ ಒಂದು ಸವಾಲೆ. ಒಂದು

ಒಳ್ಳೆಯ ಸಂಸ್ಕೃತಿ ಎಂತಹ ಉತ್ತಮ ನಡತೆಯನ್ನು ಒಬ್ಬ ಉತ್ತಮ ಪ್ರಜೆಯನ್ನು ನೀಡುತ್ತದೆ ಎಂಬುದಕ್ಕೆ ಪು.ತಿ.ನರವರೇ ಸಾಕ್ಷಿ.

ಇವರು ಒಬ್ಬ ಪ್ರತಿಭಾವಂತ ಸಾಹಿತಿ ಮಾತ್ರವಲ್ಲ. ಒಬ್ಬ ಉತ್ತಮ ಮಾನವ ಇದು ಇವರ ಸಾಹಿತ್ಯದ ಮುಖಾಂತರವೇ ನಮಗೆ ಅರಿವಾಗುತ್ತ ಹೋಗುತ್ತದೆ. ಇವರ ಪ್ರಬಂಧಗಳೂ ಇಂತಹ ಒಂದು ಉತ್ತಮ ಅಂಶಗಳನ್ನು ಮನದಲ್ಲಿ ಮೂಡಿಸುತ್ತಾ ಸಾಗುತ್ತದೆ. ಹಾಗೆಯೇ ಇವರು ರಚಿಸಿರುವ ಕಾವ್ಯ. ಮಹಾಕಾವ್ಯಗಳು ಒಂದು ಸಂಸ್ಕೃತಿಯ ದರ್ಶನದಿಂದಲೇ ಮೂಡಿರುವಂತಹುದು ಎನ್ನಬಹುದು. ಹೀಗಾಗೀಯೇ ಇವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂಸ್ಕೃತಿ ಕವಿಯೆಂದೆ ಬಿಂಬಿತವಾಗಿರುವ ಕವಿ. "ಈ ಲೋಕದ ಚೆಲುವಿಗೆ ಕುರುಡಾಗದೇ ಅದನ್ನು ಮೆಚ್ಚಿಕೊಳ್ಳುತ್ತಾ ಅದರಾಚೆಗೂ ಇರುವ ಅಲೌಕಿಕ ಅಧ್ಯಾತ್ಮದ ಬೆಳಕನ್ನು ಹಿಡಿಯ ಬಯಸಿದ ಸಾಹಿತಿ ಇವರು"[1] ಇಂತಹ ಹೆಗ್ಗಳಿಕೆ, ಪ್ರಸಿದ್ಧಿ ಪು.ತಿ.ನ ಅವರದು.

ಹೀಗೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಶ್ರಿ ವೈಷ್ಣವ ಸಿದ್ಧಾಂತ, ಹೊಯ್ಸಳರ ಕಾಲದಿಂದ ಪ್ರಸಿದ್ಧಿಗೆ ಬಂದು ಮೈಸೂರು ಅರಸರ ಕಾಲದಲ್ಲಿ ಔನ್ನತ್ಯದ ಸ್ಥಿತಿಯನ್ನು ಕಂಡು ಆಧುನಿಕ ಕಾಲದಲ್ಲಿ ವಿಶೇಷ ರೂಪದಲ್ಲಿ ನೆಲೆಗೊಂಡು ನಿಂತಿರುವುದು ಸ್ಪಷ್ಟವಾಗುತ್ತದೆ. ವಿಶಿಷ್ಟ ಸಿದ್ಧಾಂತಗಳ ಮೂಲಕವೇ ವಿಶಿಷ್ಟಾದ್ವೈತವಾದ ಸಿದ್ಧಾಂತ ಒಂದು ಮಾನವೀಯ ನೆಲೆಗಳ ಮುಖಾಂತರ ಕರ್ನಾಟಕದಲ್ಲಿ ಪ್ರಸಿದ್ಧವಾಗಿ ಗಟ್ಟಿಯಾದ ತಳಪಾಯದೊಂದಿಗೆ ಬೇರೂರಿ ನೆಲೆ ನಿಂತಿರುವುದನ್ನು ನಾವು ಗಮನಿಸಬಹುದು. ನೂರಾರು ಧರ್ಮಗಳ ಜೊತೆಯಲ್ಲಿ ಇದೂ ಒಂದು ಧರ್ಮ ಎನ್ನಿಸಿಕೊಳ್ಳದೇ ತನ್ನದೇ ಆದ ಛಾಪನ್ನು ಒಳಗೊಂಡು ಪ್ರಸಿದ್ಧಿಯಾಗಿರುವುದು ಈ ಧರ್ಮದ ವಿಶೇಷತೆಯೆನ್ನಬಹುದು. ಆಧುನಿಕ ಪರಿಸರದಲ್ಲೂ ತನ್ನದೇ ಆದ ಸಂಸ್ಕೃತಿ, ಆಚರಣೆ ಅದನ್ನು ಬಿಂಬಿಸುವ ದೇವಾಲಯಗಳು, ಈಗಲೂ ಆ ಧರ್ಮದ ಒಂದು ಚೆಲುವನ್ನು ಹಾಗೆಯೇ ಉಳಿಸಿಕೊಂಡು ಬಂದಿರುವ ಸೊಬಗನ್ನು ಕಾಣಬಹುದು. ಕರ್ನಾಟಕದ ಶ್ರೀರಂಗಪಟ್ಟಣದ 'ರಂಗನಾಥ' ದೇವಾಲಯ, ಹಾಸನ ಜಿಲ್ಲೆಯ ಕೆಲವು ಸ್ಥಳಗಳು, ಮೈಸೂರಿನ ಕೆಲವು ಸ್ಥಳಗಳು, ಮಾಗಡಿಯ 'ತಿರುಮಲೆ' ಕ್ಷೇತ್ರ. ಇವೆಲ್ಲಕ್ಕಿಂತಲೂ ಹೆಚ್ಚಾಗಿ ಮೇಲುಕೋಟೆ ಮೊದಲಾದ ಸ್ಥಳಗಳು ಶ್ರೀವೈಷ್ಣವರ ಪವಿತ್ರ ಕ್ಷೇತ್ರಗಳಾಗಿ ಶ್ರೀವೈಷ್ಣವಧರ್ಮ ಒಂದು ಉತ್ತಮ ಸಂಸ್ಕೃತಿಯ ದ್ಯೋತಕವಾಗಿ ನಿಂತಿರುವುದನ್ನು ಮನಗಾಣಬಹುದು.

ഇഇ❖ശശ

[1] ಪು.ತಿ.ನ ನೂರರ ನೆನಪು. ನಾರಾಯಣ ಮುಳ್ಳೂಡ್ - ಪ್ರಕಾಶಕರು

ಸಂಧ್ಯಾವಂದನೆಯಲ್ಲಿ ತೊಡಗಿರುವ ಪು.ತಿ.ನ ರವರು



# ಶ್ರೀ ಸೂರ್ಯ ಮಂಡಲ ವಾಹನ






## ಪು.ತಿ.ನ ಮತ್ತು ಶ್ರೀವೈಷ್ಣವ ತತ್ತ್ವ

ಆಧುನಿಕ ಕನ್ನಡ ಸಾಹಿತ್ಯದ ಉದಯದಲ್ಲಿ ಪರಮ ಭಾಗವತಕವಿ, ಸಂಸ್ಕೃತಿ ಕವಿ, ಸಾತ್ವಿಕ ಕವಿ ಎಂದೇ ಪ್ರಸಿದ್ಧರಾದವರು. ಪು.ತಿ.ನ ಕನ್ನಡ ಸಾರಸ್ವತ ಲೋಕದಲ್ಲಿ ಸರಸ್ವತಿಯ ಭಂಡಾರಕ್ಕೆ ತಮ್ಮದೇ ವಿಶಿಷ್ಟವಾದ ಕಾಣಿಕೆಗಳನ್ನು ನೀಡಿದ ಅಗ್ರಗಣ್ಯರಲ್ಲಿ ಪ್ರಮುಖ ಸ್ಥಾನವನ್ನು ಪಡೆದವರು. ವಿಶಿಷ್ಟವಾದ ಶೈಲಿ, ವಿಶಿಷ್ಟ ವಸ್ತು, ವಿಶಿಷ್ಟ ಭಾಷೆಯನ್ನು ತಮ್ಮದೇ ಆದ ಸ್ವತಂತ್ರ ವ್ಯಕ್ತಿತ್ವದಿಂದ ರೂಪುಗೊಂಡ ಸಾಹಿತ್ಯವನ್ನು ರಚಿಸಿದ ಮಹಾನ್ ವ್ಯಕ್ತಿ, ಕಾವ್ಯ, ಮಹಾಕಾವ್ಯ, ನಾಟಕ, ಗೀತ-ನಾಟಕ, ವಿಮರ್ಶೆ, ಪ್ರಬಂಧ ಮುಂತಾದ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ತಮ್ಮ ಪ್ರತಿಭೆಯನ್ನು ತೋರಿಸಿದವರು. ಇವರ ಎಲ್ಲಾ ಸಾಹಿತ್ಯ ಕೃತಿಗಳನ್ನು ಮನನ ಮಾಡಿದಾಗ ತಿಳಿಯುವ ಅಂಶವೇನೆಂದರೆ ಎಲ್ಲದರ ಮೂಲ ನೆಲೆ ಸಂಸ್ಕೃತಿಯ ತಿರುಳು. ಪರಂಪರಾಗತವಾಗಿ ಬಂದಂತಹ ಸಂಸ್ಕೃತಿಯ ಜೊತೆಗೆ ಆಧುನಿಕ ವಿಚಾರ ಲಹರಿಗಳನ್ನು ಒಳಮೂಡಿಸಿಕೊಂಡು ರಚಿತವಾದುದು ಇವರ ಸಾಹಿತ್ಯ. ಅವರದು ಈ ಸಂಸ್ಕೃತಿಯ ಮುಖಾಂತರವೇ ಓದುಗನಿಗೆ ರಸೋತ್ಪತ್ತಿವನ್ನು ನೀಡುವಂತಹ ರಚನೆಗಳು.

ಬರಿಯ ಸಾಹಿತ್ಯದ ಮುಖಾಂತರವೇ ಒಂದು ಸಂಸ್ಕೃತಿಯನ್ನು ಬಿಂಬಿಸುತ್ತಾರೆಯೇ ಎಂಬ ಪ್ರಶ್ನೆ ಉದ್ಭವಿಸಿದರೇ ಇಲ್ಲ ಎನ್ನುವ ಉತ್ತರವೇ ಸಿಗುತ್ತವೆ. ಏಕೆಂದರೆ ಇವರ ವ್ಯಕ್ತಿತ್ವವೇ ಒಂದು ಸಾಂಸ್ಕೃತಿಕ ತಾಣ ಎಂದು ಸಾಹಿತ್ಯ ಲೋಕದ ಅನೇಕ ಗಣ್ಯರು ಬಣ್ಣಿಸುತ್ತಾರೆ. ವಿನಯ, ಸಜ್ಜನಿಕೆ, ಉತ್ತಮ ಸಂಸ್ಕಾರ, ಅಹಂಕಾರರಾಹಿತ್ಯವಾದ ಬದುಕು, ಭೇದ-ಭಾವವಿಲ್ಲದೇ ಮತ್ತೊಬ್ಬರ ಜೊತೆ ಬೆರೆಯುವಿಕೆ, ಉತ್ತಮ ಆತಿಥ್ಯ ಇಂತಹ ಉತ್ತಮ ಗುಣಗಳಿಂದ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಪ್ರಸಿದ್ಧಿಯಾಗಿರುವ ಪು.ತಿ.ನ ರವರಿಗೆ ಅವರು ಬೆಳೆದು ಬಂದ ಒಂದು ವಿಶೇಷ ಸಂಸ್ಕೃತಿಯೇ ಬೆನ್ನೆಲುಬು ಎನ್ನಬಹುದು.

ಒಬ್ಬ ವ್ಯಕ್ತಿಯಲ್ಲಿ ಇಂತಹ ಉತ್ತಮ ನಡವಳಿಕೆ ಸಾಧ್ಯವಾಗಬೇಕಾದರೆ ಅದು ಒಂದು ಪೂರ್ವಜನ್ಮದ ಸುಕೃತ ಎನ್ನುತ್ತಾರೆ. ಇಲ್ಲದಿದ್ದರೆ ಮತ್ತೊಂದು ತಾನು ಪಡೆದುಕೊಳ್ಳುವ ಸಂಸ್ಕಾರ ವಿಶೇಷ,

ಈ ನೆಲೆಯಿಂದ ಪು.ತಿ.ನ ರವರನ್ನು ನೋಡಿದರೆ ಇವೆರಡೂ ಒಂದುಗೂಡಿಯೇ ಪು.ತಿ.ನ ರವರು ರೂಪುಗೊಂಡಿದ್ದಾರೆ ಎನ್ನಬಹುದು. ಪು.ತಿ.ನ ರವರೆ ಹೇಳುವ ಹಾಗೆ ತಮ್ಮಲ್ಲಿ ಬೆಳೆದ ಈ ಸಂಸ್ಕಾರ ದೈವ ಬಳುವಳಿಯಾಗಿ ಬಂದಿರುವಂತಹುದು. ಅವರ ಹುಟ್ಟು, ಬಾಲ್ಯ, ಯೌವನ ಎಲ್ಲವೂ ಒಂದು ಪರಂಪರೆಯ ಆವರಣದಲ್ಲಿ ಬೆಳೆದಂತಹ ಚಿತ್ರಣವನ್ನು ಅವರೇ ನೀಡುತ್ತಾರೆ. ಡಿ.ವಿ.ಜಿ ಯವರು "ಸಂಸ್ಕೃತಿಯೆಂದರೆ ಅದು ಒಂದು ಪೂರ್ವಜನ್ಮದ ಸಂಸ್ಕಾರ ವಿಶೇಷ, ಇದ್ದಹಾಗೆ ಅದು ಬರಲು ಸಾಧ್ಯವಿಲ್ಲ, ನಮ್ಮ ಹಿಂದಿನ ಪುಣ್ಯದ ಫಲ"[1] ಎನ್ನುತ್ತಾರೆ. ಬಹುಶಃ ಈ ಮಾತು ಪು.ತಿ.ನ ರವರಿಗೆ ಚೆನ್ನಾಗಿ ಅನ್ವಯವಾಗುತ್ತದೆ.

ಇಂತಹ ಸಂಸ್ಕೃತಿಯ ಸಾರ ಪು.ತಿ.ನ ರವರಿಗೆ ದೊರಕಿದ್ದು ವಿಶಿಷ್ಟಾದ್ವೈತ ಸಿದ್ಧಾಂತದಿಂದ ಪ್ರೇರಿತವಾದ ಶ್ರೀವೈಷ್ಣವ ಪಂಪರೆಯ ಮೂಲಕ. ಇವರ ಜನ್ಮಸ್ಥಳ ಶ್ರೀವೈಷ್ಣವರ ಪುಣ್ಯಕ್ಷೇತ್ರವಾದ ಯದುಗಿರಿ ಅಥವಾ ತಿರುನಾರಾಯಣಪುರ ಅಥವಾ ಈಗಿನ ಮೇಲುಕೋಟೆ, ಪು.ತಿ.ನ ರವರೇ ತಮ್ಮ ಬಾಲ್ಯದ ನೆನಪನ್ನು (ಸಮಗ್ರ ಕಾವ್ಯ ಸಂಪುಟದಲ್ಲಿ) ಹೀಗೆ ನಿರೂಪಿಸುತ್ತಾರೆ. "ನನ್ನ ಜನನದ ಸ್ಥಳ ಗೊರೊರು, ಚೆಲುವಾದ ಹಳ್ಳಿ. ಅಲ್ಲಿನ ಶ್ರೀವೈಷ್ಣವರು ರಸಿಕರು, ಅಲ್ಲಿನ ವಾತಾವರಣದ ಚೆಲುವು, ಪ್ರಕೃತಿಯ ರಮ್ಯತೆ ನನ್ನ ಹೃದ್ಯಲೋಕದ ಒಂದು ಭಾಗ, ಹಾಗೆಯೇ ತಮ್ಮ ಹೆಂಡತಿಯ ಊರಾದ ಹೆಮ್ಮಿಗೆ, ಹರಿಯುವ ಕಾವೇರಿ, ಗ್ರಾಮ್ಯತಮಿಳು, ಅದು ಸಹ ನನ್ನ ಹೃದಯದ ಭಾಗ, ಅಲ್ಲಿಂದಲೇ ದೊರೆತ ಹಲವು ಹಳಗನ್ನಡ, ನಡುಗನ್ನಡದ ಸಾಹಿತ್ಯಗಳು, ಇದನ್ನು ಪರಿಚಯಿಸಿದ ಹೆಮ್ಮಿಗೆ ದೇಶಿಕಾ ಚಾರ್ಯರು, ಇವೆರಡಕ್ಕಿಂತ ಪ್ರತ್ಯೇಕವಾದ ಮೇಲುಕೋಟೆ ಶ್ರೀವೈಷ್ಣವರ ಸಾಂಸ್ಕೃತಿಕ ರಾಜಧಾನಿ. ಇಲ್ಲಿನ ಪ್ರಖ್ಯಾತ ಉತ್ಸವದಂದು ನಾನು ಜನಿಸಿದ್ದರಿಂದಲೇ ದೈವದ ಒಂದು ಗಾಢವೂ ಆನಂದವೂ ಸಮೃದ್ಧವೂ ಆದ ಭಾವ ಮೊದಲ ಉಸಿರಿನಲ್ಲಿಯೇ ನ್ನನ್ನು ಹೊಕ್ಕು ಇಡೀ ಬದುಕನ್ನು ವ್ಯಾಪಿಸಿತು. ಹಾಗಾಗಿ ಇಲ್ಲಿನ ಪ್ರತಿಯೊಂದು ಕಣವೂ ನನ್ನ ಬದುಕು.[2] ಇಡೀ ಬದುಕೇ ಮೆಲುಕೋಟೆಯಲ್ಲಾದರೂ ಜೀವನದ ದಾರಿಗೋಸ್ಕರ ಮೈಸೂರಿನಲೂ ಶಿಕ್ಷಣ, ಬೆಂಗಳೂರಿನಲ್ಲಿ ಉದ್ಯೋಗ ನಡೆಸಿದರೂ ಸಹ 'ನನ್ನ ಜೀವನದ ರಸವತ್ತಾದ ಭಾಗ ಮೇಲುಕೋಟೆ' ಎನ್ನುತ್ತಾರೆ.

ಪು.ತಿ.ನ. ಹಿರಿಯರು ತಮಿಳುನಾಡಿನ ತಿರುವಳ್ಳೂರಿನಿಂದ ಬಂದು ಮೇಲುಕೋಟೆಯಲ್ಲಿ ನಾರಾಯಣನ ಸೇವೆಗೆ ನಿಂತ ವೈದಿಕ ಪರಂಪರೆಯವರು ಎನ್ನುತ್ತಾರೆ. ಇವರ ತಂದೆ ಪುರೋಹಿತ ತಿರುನಾರಾಯಣ ಅಯ್ಯಂಗಾರ್ಯರು ಅಪ್ಪಟ ಭಾಗವತ ಸಂಪ್ರದಾಯಸ್ಥರು. ಸನಾತನ ಧರ್ಮದಲ್ಲಿ ಶ್ರದ್ಧೆಯುಳ್ಳವರು. ರಾಮಾಯಣ, ಭಾರತ, ಭಾಗವತ, ಆಳ್ವಾರರ ನಾಲಾಯಿರ ಪ್ರಬಂಧಗಳು ಇವರಿಗೆ ಕರತಲಾಮಲಕವಾಗಿದ್ದವು. ಇವುಗಳನ್ನು ಕುರಿತು ಅನೇಕ ಕಡೆ ಪ್ರವಚನವನ್ನು ನೀಡುತ್ತಾ ಒಬ್ಬ ಘನ ವಿದ್ವಾಂಸ ಎನಿಸಿಕೊಂಡಿದ್ದರು. ತಾಯಿ ಗೊರೊರಿನ ಸಂಪ್ರದಾಯಸ್ಥ, ಸದ್ಗುಣಶೀಲ, ಹರಿಭಕ್ತೆ, ಇಂತಹ ಸತ್ಕುಲ ಶ್ರೀವೈಷ್ಣವ ದಂಪತಿಗಳಿಗೆ ಹಿರಿಯ ಮಗನಾಗಿ ಜನಿಸಿದವರು ಇವರು. ಇವರ ತಂದೆಯನ್ನು

---

[1] ಸಂಸ್ಕೃತಿ - ಪ್ರತಿಸಂಸ್ಕೃತಿ. ಬರಗೂರು ರಾಮಚಂದ್ರಪ್ಪ ಪು. 160

[2] ಮೆಲುಕು : ಸ. ಕವನಗಳು ಪುಃ 10

ಕಾಣಲು ಬರುವ ವಿದ್ವಾಂಸರ ಸಾಹಚರ್ಯವು ಇವರ ಜೀವನದ ಔನತ್ಯಕ್ಕೆ ದಾರೀದೀಪ. ತಮ್ಮ ತಂದೆಯ ಪಾಂಡಿತ್ಯದ ಬಗ್ಗೆ ಇವರಿಗೆ ಹೆಮ್ಮೆ ಭಕ್ತಿ, ಗೌರವ. ಇವೆಲ್ಲವೂ ಪು.ತಿ.ನ ರವರ ಬಾಲ್ಯದ ಮೇಲೆ ಮಾಡಿದಂತಹ ಪ್ರಭಾವ ಈ ಪ್ರಭಾವವೇ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ ಎನ್ನಬಹುದು.

ಮೇಲುಕೋಟೆಯಲ್ಲಿ ಬಾಲ್ಯದಲ್ಲಿ ಸಂಪ್ರದಾಯದಂತೆ ಶಿಕ್ಷಣ ಸೌಲಭ್ಯ. ಶ್ರೀವೈಷ್ಣವ ಪರಂಪರೆಯ ಮೂಲಕ ವಿದ್ಯಾಭ್ಯಾಸ ವೇದ, ಮಂತ್ರ, ಆಳ್ವಾರರುಗಳ ಪ್ರಬಂಧ ಮಾಲೆಗಳ ಪಾಠ ಸಂಸ್ಕೃತ ವ್ಯಾಸಂಗ, ಇವುಗಳ ಜೊತೆಯಲ್ಲಿಯೇ ದೊರೆತ ಪ್ರಾಥಮಿಕ ಶಿಕ್ಷಣಗಳು ಇವೆಲ್ಲವೂ ಬಾಲ್ಯಜೀವನದಲ್ಲಿ ಅವರ ಮೇಲಾಗಿರುವ ಸಂಸ್ಕೃತಿಯ ಪ್ರಭಾವ. ಅಂದರೆ ಇಡೀ ಪು.ತಿ.ನ ರವರ ಬಾಲ್ಯದ ವಾತಾವರಣ ಸಂಪೂರ್ಣ ಶ್ರೀವೈಷ್ಣವ ಪರಂಪರೆಯ ವಾತಾವರಣ, ಸಹಜವಾಗಿಯೇ ಆ ಸಿದ್ಧಾಂತ ಅವರ ಮೇಲೆ ಪರಿಣಾಮ ಬೀರಿರುವುದನ್ನು ಕಾಣಬಹುದು.

ವೈದಿಕ ವೃತ್ತಿ ಇವರಿಗೆ ಹೊಂದಿಕೆಯಾಗುವುದಿಲ್ಲವೆಂಬ ಕಾರಣದಿಂದ ಇವರ ಮುಂದಿನ ಶಿಕ್ಷಣವೆಲ್ಲವೂ ಮೈಸೂರಿನಲ್ಲಿ ನಡೆಯಿತು. ಮೈಸೂರಿನ ವಾತಾವರಣದ ಜೊತೆಗೆ ಹೊಂದಾಣಿಕೆ ಮಾಡಿಕೊಂಡ ಇವರ ಜೀವ ತುಡಿಯುತ್ತಿದ್ದದ್ದು ಮೇಲುಕೋಟೆಗಾಗಿ ಎನ್ನುವುದನ್ನು ಅವರೇ ಹೇಳುತ್ತಾರೆ. ಕಾಲೇಜಿನಲ್ಲಿ ಇವರ ಪಠ್ಯವಿಷಯಗಳೂ ತತ್ವಶಾಸ್ತ್ರ, ವೇದಾಂತದರ್ಶನ, ಸಂಸ್ಕೃತವೇ. ಜೊತೆಗೆ ಇಂಗ್ಲೀಷ್ ವಿದ್ಯಾಭ್ಯಾಸ. ಆಧುನಿಕ ಶಿಕ್ಷಣಕ್ಕೆ ಒಳಪಟ್ಟ ಇವರ ಮನಸ್ಸು ಅದಕ್ಕೆ ಸೋಲದೇ ಅದರಿಂದ ಒಳ್ಳೆಯ ಆಲೋಚನೆಗಳನ್ನು ಚಿಂತಿಸಲು ಕಲಿತೆ ಎನ್ನುತ್ತಾರೆ. ಆಧುನಿಕ ಶಿಕ್ಷಣದ ಜೊತೆಗೆ ಪರಂಪರಾನುಗತವಾದ ಬದುಕು ಇವರ ವೈಶಿಷ್ಟ್ಯ. ಇವರ ಬದುಕಿನ ವೈರುಧ್ಯವೆಂದರೆ ಇವರು ನಡೆಸಿದ ಉದ್ಯೋಗ. ಅದು ಸೈನ್ಯ ಇಲಾಖೆಗೆ ಸೇರಿದ್ದು ಇದನ್ನು ಪು.ತಿ.ನ ಸಂತೋಷದಿಂದ ಸ್ವೀಕರಿಸಿ ಇದನ್ನು ತನ್ನ ಅದೃಷ್ಟ ವಿಶೇಷ ಎನ್ನುತ್ತಾರೆ. ಮುಂದೆ ತಮ್ಮದೇ ಆದ ದೊಡ್ಡ ಕುಟುಂಬದೊಡನೆ ಸಹಬಾಳ್ವೆಯನ್ನು ಹೊಂದಿದವರು ಪು.ತಿ.ನ.

ಸಂಸ್ಕೃತಿಯ ಅಡಿಪಾಯದೊಂದಿಗೆ, ಆಧುನಿಕ ಜೀವನದ ಮೌಲ್ಯಗಳನ್ನು ಒಳಗೊಳ್ಳುತ್ತಾ ಒಂದು ಮಾನವೀಯ ಸಂಸ್ಕೃತಿಯ ನೆಲೆಗಟ್ಟನ್ನು ಸಾಹಿತ್ಯದ ಮೂಲಕ ರೂಪಿಸಿಕೊಟ್ಟವರಲ್ಲಿ ಪು.ತಿ.ನ ರವರು ಮೊದಲಿಗರು ಎನ್ನಬಹುದು. ಇವರ ಕೆಲವು ಕಾವ್ಯಗಳು, ಪ್ರಬಂಧಗಳೆಲ್ಲವೂ ಶ್ರೀವೈಷ್ಣವ ಸಂಸ್ಕೃತಿಯನ್ನೆ ಮೂಲವಾಗಿರಿಸಿಕೊಂಡು ರಚಿಸಿರುವುದಾಗಿದೆ. ಇವುಗಳಲ್ಲಿ ಅವರು ವಿಶಿಷ್ಟಾದ್ವೈತ ತತ್ವವನ್ನು ಪ್ರಸ್ತಾಪಿಸುತ್ತಾ ಸಾಗುತ್ತಾರೆ. ಆ ತತ್ವಗಳು ಅವರನ್ನು ಎಷ್ಟು ಚೇತನಗೊಳಿಸಿವೆ ಎಂಬುದನ್ನು ಅವರ ಸಾಹಿತ್ಯದ ಮುಖಾಂತರವೇ ನಾವು ಗ್ರಹಿಸಬಹುದು.

ಶ್ರೀವೈಷ್ಣವ ಧರ್ಮವೂ ಆಳ್ವಾರರುಗಳ, ಆಚಾರ್ಯರುಗಳ ಹಲವಾರು ದರ್ಶನಗಳನ್ನು ಒಳಗೊಂಡಿದೆ. ಈ ಎಲ್ಲಾ ದರ್ಶನಗಳನ್ನು ರಾಮಾನುಜಾಚಾರ್ಯರು ಪ್ರಚುರಪಡಿಸಿದ ಸಿದ್ಧಾಂತಗಳ ಮೂಲಕ ಮನಗಾಣಬಹುದು. ಈ ವಿಶಿಷ್ಟಾದ್ವೈತದ ಸಿದ್ಧಾಂತಗಳ ದರ್ಶನ ಪು.ತಿ.ನ ರವರಿಗೆ

ಬಾಲ್ಯದಲ್ಲಿಯೇ ದೊರೆತಿತ್ತು, ಜೊತೆಗೆ ಮೇಲುಕೋಟೆಯು ಪರಿಸರದಲ್ಲೂ ಅದನ್ನು ಆಚರಣೆಗೆ ತಂದಂತಹ ವಾತಾವರಣವೇ ಅವರ ಆವರಣವಾಗಿತ್ತು ಎಂದು ಮೊದಲೇ ಪ್ರಸ್ತಾಪಮಾಡಿರುವುದರಿಂದ ಆ ಸಿದ್ಧಾಂತಗಳ ದರ್ಶನ ಮತ್ತು ಪು.ತಿ.ನ ರವರ ವ್ಯಕ್ತಿತ್ವ ಹೇಗೆ ಪರಸ್ಪರ ಪೂರಕವಾಗಿ ಕೆಲಸ ಮಾಡುತ್ತದೆ ಎಂಬುದನ್ನು ಗಮನಿಸಬೇಕಾಗುತ್ತದೆ.

ರಾಮಾನುಜಾಚಾರ್ಯರು ತಮ್ಮ ಶ್ರಿಭಾಷ್ಯದ ಮಂಗಳ ಶ್ಲೋಕದಲ್ಲಿ ಬ್ರಹ್ಮಸ್ವರೂಪವನ್ನು ಈ ರೀತಿ ಹೇಳುತ್ತಾರೆ.

1. ಬ್ರಹ್ಮವೂ ಸತ್ಯ ಮತ್ತು ಜ್ಞೇಯ
2. ಪ್ರಕೃತಿಯೂ ಸತ್ಯ, ಅಸಂಖ್ಯರಾದ ಜೀವರುಗಳು ಸತ್ಯ, ಇವರು ಈಶ್ವರನ ಪ್ರಕಾರಗಳಾಗಿದ್ದಾರೆ.
3. ವ್ಯಾವಹಾರಿಕ ಪ್ರಪಂಚವೂ ಸತ್ಯವಾದದ್ದೇ.
4. ಸಾಧನೆಗಳೂ ಸತ್ಯವಾದವು. ಆತ್ಮನ ಉನ್ನತಿಯನ್ನು ಸಾಧಿಸಲು ಇವು ಅತ್ಯಂತ ಅವಶ್ಯವಾದವು.[1]

ಹಾಗೆಯೇ ಈ ಧರ್ಮ ದರ್ಶನದ ಜ್ಞಾನಯೋಗದ ಸ್ವರೂಪವು, ಯಾರು ಕರ್ಮಯೋಗವನ್ನು ಆರಂಭಿಸಿ ಅದನ್ನು ನಡೆಸುತ್ತಾ ಬಂದು ಚಿತ್ತ ಶುದ್ಧಿಯನ್ನು ಪಡೆದುಕೊಳ್ಳುತ್ತಾನೋ ಆತನೇ ಸಾಧಕ, ಆತನೇ ಜ್ಞಾನಯೋಗಕ್ಕೆ ಯೋಗ್ಯ ಎನ್ನುತ್ತಾರೆ.

ಈ ಸಿದ್ಧಾಂತಗಳ ಜೊತೆಗೆ ಪು.ತಿ.ನ ರ ಸಾಹಿತ್ಯವನ್ನು ಮತ್ತು ಅವರ ವ್ಯಕ್ತಿತ್ವವನ್ನು ಹೋಲಿಸಿದಾಗ ಈ ಸಿದ್ಧಾಂತಗಳ ಪ್ರಭಾವ ಪು.ತಿ.ನ ರ ಮೇಲೆ ಎಂತಹ ಪ್ರಭಾವವನ್ನು ಬೀರಿದ್ದವು ಎನ್ನುವುದು ತಿಳಿಯುತ್ತದೆ. ಈ ಸಿದ್ಧಾಂತ ಪ್ರಸ್ತಾಪ ಮಾಡುವುದು ಈ ಬ್ರಹ್ಮಾಂಡದ ಸತ್ಯತೆಯನ್ನು ಕುರಿತು. ನಾನು ಜೀವಂತವಾಗಿರುವವರೆಗೂ ಬ್ರಹ್ಮಾಂಡವು ಜೀವಂತವೇ, ಇದೇ ಸತ್ಯ. ಬ್ರಹ್ಮಾಂಡ ಸತ್ಯವಲ್ಲ ಸುಳ್ಳು ಎಂದು ನಿರೂಪಿಸುವುದಾದರೇ ನಾನು ಸುಳ್ಳೆಂದು ಹೇಳಬೇಕಾಗುತ್ತದೆ. ನನ್ನ ಮುಖಾಂತರ ಬ್ರಹ್ಮನನ್ನು ಕಾಣುವುದರಿಂದ ಅದು ಸತ್ಯ. ಹಾಗಾಗಿ ಇಲ್ಲಿನ ಪ್ರತಿಯೊಂದು ವಸ್ತುವು ಸತ್ಯವೇ, ಪ್ರಕೃತಿ, ಜೀವ, ಎಲ್ಲವೂ ಸತ್ಯವೇ. ಎಲ್ಲವೂ ಆ ದೇವನಿಂದ ಸೃಷ್ಟಿಯಾದ ಪ್ರಕಾರಗಳೇ. ಆದ್ದರಿಂದಲೇ ಈ ದರ್ಶನ ಮನುಷ್ಯರಲ್ಲಿ ಭೇದ-ಭಾವವನ್ನು ನೀರಿಕ್ಷಿಸುವುದಿಲ್ಲ.

ರಾಮಾನುಜಾಚಾರ್ಯರು ಮೇಲುಕೋಟೆಯ ದೇವಸ್ಥಾನಕ್ಕೆ ಹರಿಜನರನ್ನು ಆಹ್ವಾನಿಸಿ ಪರಂಪರೆಯಿಂದ ಬಂದ ದೇವಾಲಯ ಸಂಸ್ಕೃತಿಗೆ ಹೊಸರೂಪವನ್ನು ನೀಡಿದರು. ಜಾತಿ -ಭೇದವಿಲ್ಲದ

---

[1] ರಾಮಾನುಜದರ್ಶನಃ ಪು-90 ಲೇಖಕ : ಡಾ॥ ಎನ್.ಎಸ್.ಅನಂತರಂಗಾಚಾರ್ಯ ಪ್ರ- ರಾಮಪ್ರಿಂಟರ್ಸ್-2005

ಒಂದು ಬದುಕನ್ನು ಬೆಳಸಲು ಪ್ರಯತ್ನ ಪಟ್ಟಂತಹ, ಸಿದ್ಧಾಂತ ಪು.ತಿ.ನ ರವರ ವ್ಯಕ್ತಿತ್ವಕ್ಕೆ ಪ್ರಭಾವವನ್ನು ಬೀರಿ ಹೊಸ ಮೆರುಗನ್ನು ನೀಡಿದ್ದವು ಎನ್ನಬಹುದು.

ವೇಷ ಭೂಷಣದಲ್ಲಿ ಪುರಾತನರೂ, ಆಲೋಚನೆಯಲ್ಲಿ ಆಧುನಿಕರು, ಸ್ನಾನ, ಸಂಧ್ಯಾವಂದನೆ ಜುಟ್ಟು, ನಾಮ, ಎಲ್ಲಾ ಉಂಟು ಆದರೆ ಅಬ್ರಾಹ್ಮಣನಾದ ನಮ್ಮ ಮನೆಯಲ್ಲಿ ಇರಲು, ಊಟ ತಿಂಡಿ ಮಾಡಲು ಯಾವುದೇ ಆಕ್ಷೇಪಣೆಯಿಲ್ಲ.[1]

ಈ ಮಾತನ್ನು ಹೇಳುವ ಉದ್ದೇಶ ಒಂದು ಉತ್ತಮ ಧರ್ಮದರ್ಶನ ಉತ್ತಮ ವ್ಯಕ್ತಿತ್ವವನ್ನು ಹೇಗೆ ರೂಪಿಸುತ್ತದೆ ಎನ್ನುವ ಕಾರಣಕ್ಕಾಗಿ. ಇಲ್ಲಿರುವ ಎಲ್ಲಾ ಜೀವವೂ ಸತ್ಯವೇ ಆದುದರಿಂದ ಎಲ್ಲವೂ ಚೇತನವೇ ಆಗಿರುವುದರಿಂದ, ಇಲ್ಲಿ ಭೇದಗಳಿಗೆ ಎಡೆಯಿಲ್ಲ.

ಶ್ರೀವೈಷ್ಣವ ಸಿದ್ಧಾಂತದ ಉದಾಹರಣೆಯಾಗಿ ಪು.ತಿ.ನ ರವರ ಶ್ರೇಷ್ಠ ಕವನ 'ರಂಗವಲ್ಲಿ'ಯನ್ನು ಗಮನಿಸಬಹುದು. ಕವಿ ಒಂದು ಮಗುವಿನ ಜೊತೆಯಲ್ಲಿ ಮೇಲೆ - ದೇಗುಲಕ್ಕೆ ಬಂದಾಗ ದೇವಾಲಯದಲ್ಲಿ ಜನ-ಜಂಗುಳಿಯಿಲ್ಲದ ಈ ದೇವಾಲಯ ಅವರ ಆತ್ಮ ಸಂತೋಷಕ್ಕೆ ಕಾರಣವಾಗುತ್ತದೆ. ದೇಗುಲದಲ್ಲಿ ಮಂದಿಯಿಲ್ಲ ಜನ ಜಂಗುಳಿಯಿಲ್ಲ "ವೇದ ಘೋಷವಿಲ್ಲ" "ತಮಿಳು ಪದ್ಯವನ್ನು ಹೇಳುವವರಿಲ್ಲ" ಮಾನ ಸಲಿಸಲಿಲ್ಲವೆಂಬ ಜಗಳವಿಲ್ಲ. ಈ ವಾಕ್ಯಗಳು ಆಚರಣೆಯ ಆಡಂಬರದ ವ್ಯರ್ಥ ಸ್ವರೂಪವನ್ನು ಸೂಚಿಸುತ್ತದೆ. ಅಂದರೆ ದೇವಾಲಯದ ವಾತಾವರಣ ಮಾನವನಿಗೆ ಏನನ್ನು ನೀಡ ಬೇಕು, ಅದನ್ನು ನೀಡದೇ, ಅರ್ಥವಿಲ್ಲದ ಆಚರಣೆಗಳನ್ನು ಬಳಸುತ್ತಾ, ನೀಡಲಾರದ ಸ್ಥಿತಿಯನ್ನು ವಿವರಿಸುತ್ತಿದ್ದಾರೆ. ಏಕಾಂತದ ಸೌಂದರ್ಯವನ್ನು ಸವಿಯುವ ಇವರಿಗೆ ಒಬ್ಬ ಬಡವೃದ್ಧೆಯ ದರ್ಶನವಾಗುತ್ತದೆ. ಆಕೆ ತನ್ನ ಸೀರೆಯ ಸೆರಗಿಂದ ನೆಲವನ್ನು ಒರೆಸುತ್ತಾ ರಂಗವಲ್ಲಿಯನ್ನು ಬಿಡಿಸುತ್ತಾ ಸಾಗುತ್ತಾಳೆ ಆಕೆ ಬಿಡಿಸುವ ರಂಗವಲ್ಲಿ ಅವಳ ಆತ್ಮದ ಭಕ್ತಿ ದರ್ಶನವನ್ನು ಕವಿ ಈ ರೀತಿ ವರ್ಣಿಸುತ್ತಾರೆ.

ಮೊದಲು ನೂರು ದಳದ ಪದ್ಮ
ಅದರ ಸುತ್ತ ಬಳ್ಳಿ ಹೆಣಿಗೆ
ಬಳ್ಳಿಯೆಲೆಯ ಮೇಲೆ ಪಕ್ಷಿ
ಯುಗದ ಬೇಟವು.[2]

ಈ ರೀತಿ ತನ್ನ ಮನದ ಭಾವದಂತೆ ಹಸೆಯನ್ನು ಬರೆಯುತ್ತಿರುವ ಆ ಮುದುಕಿಯನ್ನು ನೋಡಿ ಅವಳ ಕಲೆಗೆ ಮುಗ್ದರಾಗುತ್ತಾರೆ. ಹಾಗೆಯೇ ಆ ಮುಪ್ಪಿನ ಕೈಯಿಂದ ಒಂದು ತಪ್ಪನ್ನೂ ಮಾಡದ ಆ ಆತ್ಮಶಕ್ತಿ ಅವರಿಗೆ ಬೆರಗನ್ನುಂಟು ಮಾಡುತ್ತದೆ. ಆದರೆ ಆ ಕ್ಷಣವೇ ಆ ಮುದುಕಿಯ ಜೀವನದ

---

[1] ಪು.ತಿ.ನ ಒಂದು ಆತ್ಮೀಯ ನೋಟ : ಡಾ|| ಪ್ರಭುಶಂಕರ, ಗ್ರ: ಪು.ತಿ.ನ ನೂರರ ನೆನಪು, ಪು.23 -2005 ಸ: ಕಮಲಾನರಸಿಂಹ

[2] ರಂಗವಲ್ಲಿ : ಸಮಗ್ರ ಕವನಗಳು ಪು. 63

ಚಿತ್ರಣವನ್ನು ನೀಡುತ್ತಾರೆ. ಈ ಹಣ್ಣು ಮುದುಕಿ ತೀರ ಬಡವೆ, ಅಯ್ಯೋ ಎನ್ನುವವರೂ ಯಾರು ಅಕೆಗಿಲ್ಲ ಹಾಗಾದರೆ ಆಕೆಗಿರುವವನು ಯಾರು? ಆಕೆಗಿರುವವನೊ ಆ ಮಲೆಯ ದೇವ ನರಸಿಂಹನೊಬ್ಬನೆ. ಅವನನ್ನು ಮೆಚ್ಚಿಸುವುದಕ್ಕೊಸ್ಕರವೇ ತನ್ನ ಮುಪ್ಪಿನ ದುಃಖವನ್ನು, ಕಷ್ಟವನ್ನು ಮೂಲೆಗೊತ್ತಿ, ಬೆಟ್ಟವನ್ನು ಏರಿ ರಂಗವಲ್ಲಿಯನ್ನು ಬರೆಯುವ ಇಂತಹ ಭಕ್ತಿ ಎಂಥದು? ಎನ್ನುವ ಪ್ರಶ್ನೆ ಇಂತಹ ಭಕ್ತಿ ಸ್ವಾರ್ಥಪರವಲ್ಲದ ಅಂತರಂಗದ ಭಕ್ತಿ ಎನ್ನುತ್ತಾರೆ. ಮತ್ತೆ ದೇವಾಲಯದ ಬಾಗಿಲು ತೆಗೆದು ಅಲಂಕಾರಯುಕ್ತನಾದ ನರಸಿಂಹನನ್ನು ನೋಡಿ, ಅವನ ಚೆಲುವಿಗೆ ತಲೆಬಾಗಿ ತನ್ನ ಜೊತೆಯಲ್ಲಿರುವ ಮಗುವಿಗೆ ದೇವರನ್ನು ವೀಕ್ಷಿಸಲು ಹೇಳಿದರೆ ಆ ಮಗುವಿಗೆ ದೇವನಿಗಿಂತ ಆ ರಂಗೋಲಿಯ ಆಕರ್ಷಣೆಯೇ ಹೆಚ್ಚಾಗಿರುತ್ತದೆ. ಆ ಹಸೆಯನ್ನು ಕಣ್ತುಂಬಾ ತುಂಬಿಕೊಂಡು ಆನಂದಪಡುತ್ತಾ ನಿಂತಿರುತ್ತದೆ. ಆ ಮಗುವಿನ ನಡತೆ ಇವರ ಮನಸಿಗೊಂದು ಅನುಭವ ನೀತಿಯನ್ನು ನೀಡುತ್ತದೆ. ದೇವನೆಂದರೆ ಬರಿಯ ಬೊಂಬೆ, ಪೂಜೆಯೆನ್ನುವುದು ಆಟ, ಆದರೆ ಭಕ್ತಿ ತೆರೆದಿರತ್ತದೆ ಇದೇ ಸೋಜಿಗ. ದೇವರಿದ್ದಾನೋ ಇಲ್ಲವೂ ತಿಳಿಯದು, ಆದರೆ ಮನುಷ್ಯನ ಪಾಪ, ಕರ್ಮಗಳಿಗೆಲ್ಲಾ ಮುಕ್ತಿ ಸಿಗಬೇಕಾದರೆ ಭಕ್ತಿಯೇ ದರ್ಶನ ಎನ್ನುತ್ತಾರೆ. ಮುಂದೆ ಮುದುಕಿ ಸತ್ತರೂ ಅವಳ ನೆನಪು ಪು.ತಿ.ನರಿಗೆ ಸದಾ ಕಾಡುತ್ತದೆ. ಆದು ತನ್ನ ಜ್ಞಾನ ದೀವಿಗೆಗೆ ಬೆಳಕನ್ನು ನೀಡಿದ, ತಂಪನ್ನು ನೀಡಿದ ಭಕ್ತಿ ಆ ಮುಗ್ಧಭಕ್ತಿಯುನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ ಎನ್ನುವ ಭಾವ ಈ ಕವಿತೆಯಲ್ಲಿ ಮೂಡಿ ಬಂದಿರುವುದನ್ನು ಕಾಣಬಹುದು.

ಆದರವನನೊಲಿಸುವುದನೆ
ಬಾಳಿನೊಂದೆ ಗುರಿಯ ಮಾಡಿ
ದವಳ ನೆನಪು ಎಂದು ಮನಕೆ
ತಂಪನೀವುದು.[1]

ಇಲ್ಲಿ ಎಲ್ಲಾ ವಸ್ತುಗಳು ಸಚೇತನವೇ ಎಂದಾಗ ಪ್ರತಿಯೊಬ್ಬರು ಮತ್ತೊಬ್ಬರಿಂದ ಕಲಿಯುವುದು ಬೇಕಾದಷ್ಟು ಇರುತ್ತದೆ. ತಾನು ಎಷ್ಟೇ ವಿದ್ವಾಂಸನಾಗಿದ್ದರೂ ಒಬ್ಬ ಬಡ ಮುದುಕಿಯಿಂದ ದರ್ಶನ ಸ್ವರೂಪವನ್ನು ಅರಿತದ್ದು ಅವರ ವ್ಯಕ್ತಿತ್ವದ ವೈಶಾಲ್ಯ ಇದು ವಿಶಿಷ್ಟಾದ್ವೈತದ ದರ್ಶನದ ಒಂದು ಸ್ವರೂಪ. ಏಕೆಂದರೆ ರಾಮಾನುಜರ ಬಗ್ಗೆ ಇರುವ ಅನೇಕ ಐತಿಹಾಸಿಕ ಕಥೆಗಳಲ್ಲಿ ಇಂತಹುದೇ ಒಂದು ಕಥೆ ಇದೆ. ಶ್ರೀರಂಗದ ದೇವಾಲಯದಲ್ಲಿ ಇಬ್ಬರೂ ಪ್ರೇಮಿಗಳನ್ನು ರಾಮಾನುಜರು ನೋಡುತ್ತಾರಂತೆ. ಈ ಪ್ರೇಮಿಗಳು ಒಬ್ಬರನ್ನೊಬ್ಬರು ಬಿಟ್ಟಿರುವುದಿಲ್ಲ, ಪ್ರಿಯನಂತೂ ತನ್ನ ಪ್ರಿಯತಮೆಯಿಂದ ಕಣ್ಣನ್ನು ಕೀಳದೆ ಅವಳನ್ನೆ ಸುತ್ತುವುದನ್ನು ಕಂಡ ಆಚಾರ್ಯರಿಗೆ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯುನ್ನು ಇಷ್ಟೊಂದು ಪ್ರೀತಿಸುವುದಾದರೆ, ತಾನು ನಂಬಿದ ದೈವವನ್ನು ಮನುಷ್ಯ ಎಷ್ಟು ಪ್ರೀತಿಸಬಹುದು ಎಂಬ ಸತ್ಯದ ದರ್ಶನ ಹೊಳೆಯುತ್ತದಂತೆ, ಪ್ರಾಪಂಚಿಕ ರೀತಿ ನೀತಿಗಳಿಂದ ಮನುಷ್ಯ ಪಡೆಯುವಂತಹ ದರ್ಶನಗಳು

---

[1] ರಂಗವಲ್ಲಿ ಸ. ಕವನಗಳು ಪು.64

ಎಷ್ಟಿರುತ್ತವೇ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ ಪು.ತಿ.ನ ಅವರಿಗೆ ರಂಗವಲ್ಲಿಯಲ್ಲಿ ಆದದ್ದು ಅಂತಹದೇ 'ದರ್ಶನ'.

ಸಾಧನಗಳು ಸತ್ಯ ಎನ್ನುತ್ತದೆ ಶ್ರೀವೈಷ್ಣವ ಸಿದ್ಧಾಂತ ಒಬ್ಬ ವ್ಯಕ್ತಿ ತಾನು ಸ್ವಂತ ವ್ಯಕ್ತಿತ್ವದಿಂದ ಸಾಧಿಸುವ ಸಾಧನೆಗಳೇನೆ ಇರಲಿ ಅದು ಸತ್ಯ ಏಕೆಂದರೆ ಅದರಿಂದ ದೊರೆಯುವ ಆತ್ಮಾನಂದ ಮತ್ಯಾವುದರಿಂದಲೂ ಸಿಗುವುದಿಲ್ಲ. ಇಂತಹ ನಿಜವಾದ ಆನಂದವನ್ನು ಅನುಭವಿಸುತ್ತಿದ್ದವರು ಪು.ತಿ.ನ ರವರು ತಾವು ಹೊಸ ಕವಿತೆಯನ್ನು ಬರೆದು ತೀ.ನಂ.ಶ್ರೀ ಮತ್ತು ಹಂಪನಾರವರ ಜೊತೆ ಹಂಚಿಕೊಳ್ಳುವಾಗ ಅವರು ಮೊದಲು ಹೇಳುತ್ತಿದ್ದ ಮಾತು this is my latest and best[1] ಇದು ಕವಿಯೊಬ್ಬನ ಆತ್ಮ ತೃಪ್ತಿಯ ಸಂಕೇತ ಇಂತಹ ಜೀವನ ದೃಷ್ಟಿ ಪು.ತಿ.ನ ರವರ ಇಡೀ ಜೀವನವನ್ನು ವ್ಯಾಪಿಸಿಕೊಂಡಿದೆ. ವಿಶಿಷ್ಟಾದ್ವೈತದ ಜ್ಞಾನಯೋಗದ ಸ್ವರೂಪವು ಬಿಂಬಿಸುವುದು ಯಾರು ಕರ್ಮಯೋಗವನ್ನು ಸಾಧಿಸುತ್ತಾ ಅದನ್ನು ನಡೆಸುತ್ತಾ ಬಂದು ಚಿತ್ತ ಶುದ್ಧಿಯನು ಪಡೆದುಕೊಳ್ಳುತ್ತಾರೋ ಅವನೇ ಸಾಧಕ ಅವನೇ ಜ್ಞಾನಯೋಗಕ್ಕೆ ಯೋಗ್ಯ ಎನ್ನುತ್ತದೆ. ಪು.ತಿ.ನ ರ ಜೀವನದಾರಿಯನ್ನು ಗಮನಿಸಿದಾಗ ಅವರದು ಬಾಲ್ಯದಿಂದಲೇ ಆಚಾರವಂತರಾಗಿ, ಪಾಂಡಿತ್ಯವನ್ನು ಪಡೆದು, ಉದ್ಯೋಗವನ್ನು ಕೈಗೊಂಡು, ತುಂಬು ಕುಟುಂಬದ ಯಜಮಾನನಾಗಿ ಸುಖ - ದುಃಖ ಎರಡನ್ನು ಸಮಾನಚಿತ್ತರಾಗಿ ಅನುಭವಿಸಿ, ಯಾವುದಕ್ಕೂ ಆಸೆಪಡದೆ, ಇರುವುದರಲ್ಲಿಯೇ ತೃಪ್ತಿಪಟ್ಟ ಜೀವ. ಈ ಜೀವನದಿಂದಲೇ ಆತ್ಮೋನ್ನತಿಯನ್ನು ಪಡೆದಜೀವ, ಸಾಹಿತ್ಯ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿ, ಎಂದೂ ಎಲ್ಲೂ ತಮ್ಮ ಸಾಧನೆಯನ್ನು ಹೇಳಿಕೊಳ್ಳದೇ ಇದ್ದಂತಹ ಜೀವ. ಇದು ಶ್ರೀವೈಷ್ಣವ ತತ್ವದ ನಿಜವಾದ ಸಾಧಕನ ಲಕ್ಷಣವಲ್ಲವೇ?

ವಿಶಿಷ್ಟಾದ್ವೈತದ ಕರ್ಮ – ಜ್ಞಾನ – ಭಕ್ತಿ ಯೋಗಗಳು ಏನನ್ನು ಪ್ರತಿಪಾದಿಸುತ್ತದೆಯೋ ಪು.ತಿ.ನ ರ ಜೀವನ ಮತ್ತು ಸಾಹಿತ್ಯ ಅವನ್ನು ಪ್ರತಿಬಿಂಬಿಸುತ್ತದೆ. ಆದರೆ ಈ ಸಿದ್ಧಾಂತಗಳ ಕಾರಣಕ್ಕಾಗಿ ಅವರು ಆಧುನಿಕತೆಯನ್ನು ಬಿಟ್ಟವರಲ್ಲ. ಆಧುನಿಕ ನೆಲೆಯಿಂದ ನೋಡುತ್ತಲೇ ಪರಂಪರೆಯ ತತ್ವವನ್ನು ಸ್ವೀಕರಿಸುವ ಮನೋಧರ್ಮವನ್ನು ಅವರಲ್ಲಿ ಕಾಣುತ್ತೇವೆ. ಭಕ್ತಿಯೋಗ ಭಕ್ತಿಯನ್ನು ಹೀಗೆ ಪ್ರತಿಪಾದಿಸುತ್ತದೆ. ಭಕ್ತಿ ಎನ್ನುವುದು ಯಾರೊಬ್ಬರ ಸ್ವತ್ತಲ್ಲ. ಅದು ಸಹಜವಾಗಿ ಬರುವಂತಹುದು. ಇದನ್ನು ನಾನಾ ವಿದ್ಯೆಗಳ ಮೂಲಕ ಕಲಿಯಬೇಕಾಗಿಲ್ಲ, ಎಂತಹ ಸಾಮಾನ್ಯ ಮನುಷ್ಯರಲ್ಲೂ ಅದು ಅಸಾಮಾನ್ಯವಾಗಿ ಹೊಳೆಯುತ್ತಿರುತ್ತದೆ ಇದನ್ನು ತಮ್ಮ "ವಿಶ್ವ ಕುಟುಂಬಿಯ ಕಷ್ಟ" ಕವಿತೆಯಲ್ಲಿ ನಿರೂಪಿಸುತ್ತಾರೆ. ಇಲ್ಲಿ ಬರುವ 'ನಾಗಿ' ನಿಜವಾದ ಭಕ್ತೆ, ಭಕ್ತೆಯ ದರ್ಶನದಿಂದ ಪು.ತಿ.ನ. ರವರಿಗೆ ನಿಜವಾದ ಭಕ್ತಿ ದರ್ಶನವಾಗುತ್ತದೆ. ತನ್ನ ಎರಡು ಮಕ್ಕಳನ್ನು ಸಾಕಲು ಇಷ್ಟು ಕಷ್ಟ ಪಡುವಾಗ ಈ

[1] ಪು.ತಿ.ನ ನೆನಪಿನಂಗಳದಲ್ಲಿ : ಹಂಪ ನಾಗರಾಜಯ್ಯ ಪು. 26 ಪು.ತಿ.ನ ನೂರರ ನೆನಪು

ಲೋಕವನ್ನು ಕಾಯುವ ಆ ನನ್ನ ಶ್ರೀನಿವಾಸನಿಗೆ ಎಷ್ಟು ಕಷ್ಟ ಎಂದು ದುಃಖಪಡುತ್ತಾಳೆ. ಇದು ಅರಿವಿನ ಮೂಲ. ಇನ್ನೊಬ್ಬರಿಗಾಗಿ ಮರುಗುವಂತಹ ನೀತಿ ಇದು, ಇದೇ ಮಾನವೀಯತೆ, ಇದೇ ಸಾಧನೆ; ಇಂತಹ ಸಾಧಿಸುವ ಗುಣದ ಅನೇಕ ಸಾಹಿತ್ಯ ಕೃತಿಗಳೇ ಪು.ತಿ.ನ ರವರ ನಿಜವಾದ ಸಾಧನೆ ಎನ್ನಬಹುದು.

ಹಾಗೆಯೇ ಇವರ 'ಕಣಿವೆಯ ಮುದುಕ' ಇಂತಹ ಮಾನವೀಯ ಮುಖದ ಪರಿಚಯವನ್ನು ಮುಂದುವರಿಸುತ್ತದೆ. ಮುಪ್ಪಿನ ಮದುಕನೊಬ್ಬ ಕತ್ತಲಾವರಿಸುವ ಕಾಡಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದಾನೆ. ನಿರೂಪಕ ತಾನು ಈ ಕತ್ತಲಿಗೆ ಹೆದರಿ ಹೋಗುವಂತಹ ಸಮಯದಲ್ಲಿ ಈ ಮುದುಕನನ್ನು ಕಾಣುತ್ತಾನೆ. ಈ ಮುದುಕನಿಗೆ ಆಸರೆ ನೀಡುತ್ತಾನೆ ಕವಿ.

ಗೌಡ ಕ್ಷಮಿಸೈ ಃ ಇರುಳು, ಕಾಣದು
ಮೋಡ ಮುಸುಕಿದೆ – ಕಾಡಿಗೊಬ್ಬನೆ
ಮೇಡಹತ್ತಲು ಕಷ್ಟವಹುದೈ ಜೊತೆಗೆ ನಿಲ್ಲುವೆ"ನೆಂದನು

ಈ ಮಾತನ್ನು ಕೇಳಿದ ಮುದುಕನು ಮೊದಲು ಕೋಪಿಸಿ ನಂತರ ನಗುತ್ತಾನಂತೆ

"ಮುದಿಗೆ ಚಳಿಯೆ, ಇರುಳೆ ಮಳೆಯೆ,
ಕಾಡೆ, ಮೇಡೆ? ನಡೆಯೊ ನೀ"

ತಕ್ಷಣ ಕವಿಗೆ ಅನ್ನಿಸುವುದು ಹೀಗೆ

ಹಳುವಿನೊಳಗೂ ಮರುಕ ಬೇಡವೆ
ಇಳೆಯ ಬವಣೆಗೆ ಜಡ್ಡು ಬಿದ್ದನೇ?
ಕಳೆದ ಬಾಳೊಳು ದಯೆಯ ಕಾಣದೆ
ಇಂದು ಕಾಣಲು ಹಳಿವನೆ?

ಇಂತಹ ಯೋಚನೆ ಬರುವುದೇ ಮಾನವೀಯ ಮನಸ್ಸುಗಳಿಗೆ. ಇಲ್ಲಿಯ ನಿರೂಪಕ ಪು.ತಿ.ನ. ಹಾಗಾದಾಗ ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ಮಿಡಿಯುವ ರೀತಿ ಇವರ ಮನಸ್ಸಿಗೆ ತಿಳಿಯುವುದು ಅದರ ಪರಿಣಾಮ ಅವನನ್ನು ಪ್ರೀತಿಯಿಂದ ಮಾತನಾಡಿಸುತ್ತ, ಅವನ ಜೀವನದ ಮೇಲಿದ್ದ ಕೋಪವನ್ನು ಅಳಿಸುತ್ತಾ, ಆತ ಬೇಡವೆಂದರು ಅವನ ಜೊತೆಯಲ್ಲಿ ನಿಂತು ಹೆಜ್ಜೆ ಹೆಜ್ಜೆಗೂ ಅವನಿಗೆ ಸಹಾಯ ಮಾಡುತ್ತಾ ಸಾಗುತ್ತಾರೆ. ಮುಂದೆ ಮಿಂಚು ಬೆಳಕಲ್ಲಿ ಅವನ ಮುಖದಲ್ಲಿ ಸುರಿಯುವ ಕಣ್ಣೀರನ್ನು ಕಂಡು ಕವಿಗೆ ಅಚ್ಚರಿಯಾಗುತ್ತದೆ. ಆವನನ್ನು ಪ್ರಶ್ನಿಸಲು ತೊಡಗುತ್ತಾರೆ. ಮುದಿತನವನ್ನು ಹಳಿಯುವಿಯಾ? ಅಥವಾ ಈ ಕಾಡಿನ ಕತ್ತಲೆಗೆ ಭಯಗೊಂಡಿರುವೆಯಾ, ಅಥವಾ ನಿನ್ನ ಅಬಲತೆಗೆ ದುಃಖಗೊಂಡಿರುವೆಯಾ? ನಿನ್ನ ಮನಸ್ಸಿನೊಳಗಿರುವ ನೋವೇನು? ಹೇಳು ಎಂದಾಗ ಮುದುಕ ಕವಿಯ ಕೈಯನ್ನು ಅದುಮುತ್ತಾ ಮೆಲ್ಲನೆ ನುಡಿಯುತ್ತಾನಂತೆ.

"ನಿನ್ನ ಈ ಬಗ್ಗೆ ಮರುಕ ತಂದಿತು

ಮರೆತ ಕಂದನ ನೆನಪನು" ಈ ನುಡಿ ಮುಂದೆ ಮಾತನಾಡಲು ನಿರೂಪಕನಿಗೆ ತಡೆಯೊಡ್ಡುತ್ತದೆ. ಭಾವನೆಗಳಿಗೆ ಸಿಲುಕುವಂತೆ ಮಾಡುತ್ತದೆ. ಅದಕ್ಕೆ ಕವಿ ಕೊಡುವ ಮುಕ್ತಾಯ.

ನುಡಿಯು ತಿಳುಹಲು ಬಲ್ಲುದೇನ

ಮೌನ ನುಡಿದಾ ದುಗುಡವ? ಈ ಕವಿತೆಯ ಮುಕ್ತಾಯವೇ ಈ ಕವನದ ಕಟ್ಟಡ. ಇಲ್ಲಿ ಬರುವ ಕಂದನ ನೆನಪು ಯಾರದು. ಮುದುಕನ ಕಂದನದು, ನಿರೂಪಕನ ಕಂದನದು, ಮುದುಕನ ಕಂದನಾದರೆ ಮಗನೇ ಕಾಡಿಗೆ ಅಟ್ಟಿದ್ದಾನೆಯೋ, ಅಥವಾ ಕಂದ ಮರಣಹೊಂದಿದ್ದಾನೆಯೋ? ಎನ್ನುವ ಹಲವಾರು ಪ್ರಶ್ನೆಗಳು ಏಳುತ್ತವೆ. ನಿರೂಪಕನಿಗೆ ಭಾವನೆಗಳು ಉಕ್ಕಿಬರುತ್ತವೆಯಾದರೆ ಆ ಕಣಿವೆಯಲ್ಲಿ ಆತನು ಒಬ್ಬನೇ ಬರುತ್ತಿರುತ್ತಾನೆ. ಹಾಗಾದರೆ ಇಲ್ಲಿ ಇಬ್ಬರು ಸಮಾನದುಃಖಿಗಳು. ಒಬ್ಬರ ಭಾವನೆ ಮತ್ತೊಬ್ಬರ ಜೀವನಪರದರ್ಶನವನ್ನು ತೋರಿಸುವಂತಹ ಕ್ರಿಯೆ ಈ ಕವನದಲ್ಲಿ ಅದ್ಭುತವಾಗಿ ಮೂಡುತ್ತದೆ. ಆದುದರಿಂದಲೇ ಕವಿಗೂ ಇಲ್ಲಿ ಮಾತಿಗಿಂತ ಮೌನವೇ ಸಹನೆಯಾಗುತ್ತದೆ. ಆ ಮೌನವೇ ಎಲ್ಲ ಭಾವನೆಗಳಿಗೂ ಉತ್ತರವನ್ನು ನೀಡುತ್ತದೆ. ಈ ರೀತಿಯ ಮಾನವನ ಎದೆ ಕಲುಕುವಂತಹ ಕವಿತೆಗಳು ಬಹಳ ನೇರವಾಗಿ ಓದುಗನ ಮನಮುಟ್ಟುತ್ತದೆ.

ಶ್ರೀವೈಷ್ಣವರಿಗೆ ಶ್ರಿಮನ್ನಾರಾಯಣನೇ ಪರಮದೈವ. ಅವನೇ ವಾಸುದೇವ ಅವನನ್ನು ಮನಸಾ ಸ್ಮರಿಸಿದವರಿಗೆ ಎಲ್ಲಾ ಭಾಗ್ಯವುಂಟು. ಇಂತಹ ಮೂಲ ನೆಲೆಯೇ ಇವರ ದೈವಭಕ್ತಿಗೆ ಕಾರಣ. ಪು.ತಿ.ನರ ಪರಮ ಪ್ರೀತಿಯ ದೈವ ವಾಸುದೇವ. ಪರಮ ಪ್ರೀತಿಯ ಸ್ಥಳ ಮೇಲುಕೋಟೆಯ ಮಲೆದೇಗುಲ. ಈ ಎರಡು ಅವರ ಸಾಹಿತ್ಯದಲ್ಲಿ ವಿಪುಲವಾಗಿ ಬಳಕೆಯಾಗಿರುವುದು ಕಾಣಬಹುದು. ಇವರ ಗೀತ-ನಾಟಕಗಳಾದ ಗೋಕುಲ ನಿರ್ಗಮನ, ಕೃಷ್ಣ -ಕುಚೇಲ, ದೀಪಲಕ್ಷ್ಮಿ, ಯದುಶೈಲ ದೀಪಂ ಇವುಗಳಲ್ಲಿ ಬಳಕೆಯಾಗಿರುವುದು ವಾಸುದೇವನೇ ಕನ್ನಡದ ಅತ್ಯಂತ ಶ್ರೇಷ್ಠ ಗೀತ-ನಾಟಕ ಗೋಕುಲ ನಿರ್ಗಮನ. ಹಾಗೆಯೇ ಇವರ ಮಹಾಕಾವ್ಯ ಶ್ರಿಹರಿಚರಿತೆ. ಎರಡೂ ಕೃಷ್ಣನ ಕಥಾನಕವೇ, ಭಾಗವತನಾದ ಶ್ರೀ ಕೃಷ್ಣನ ಬಾಲಲೀಲೆಗಳಿಂದ ಆತನ ಅವಸಾನದವರೆಗೂ ಚಿತ್ರಿತವಾಗಿರುವ ಕಥಾನಕವೇ. ಶ್ರೀ ಹರಿಚರಿತೆ, ಗೋಕುಲ ನಿರ್ಗಮನ ಈ ಎರಡೂ ಕೃತಿಗಳು ಕೃಷ್ಣ ಗೋಕುಲವನ್ನು ತೊರೆದು ಹೋಗುವಂತಹ ಸನ್ನಿವೇಶವನ್ನು ಚಿತ್ರಿಸುತ್ತದೆ.

ಹಳಗನ್ನಡ ಕಾವ್ಯಗಳಲ್ಲಿ ಕಂಡು ಬರುವ ಭಕ್ತಿ ಕೃತಿಗೂ ಪು.ತಿ.ನ ಆಧುನಿಕ ಕಾಲದಲ್ಲಿ ತೋರಿಸುವಂತಹ ಭಕ್ತಿ ಕೃತಿಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಆಧುನಿಕತೆಯಿಂದ ಕೂಡಿದ ಒಂದು ಸಮಾಜದಲ್ಲಿ ಭಕ್ತಿಕೃತಿಯನ್ನು ವಿಭಿನ್ನವಾಗಿ ಆಲೋಚಿಸಬೇಕಾಗುತ್ತದೆ. ಏಕೆಂದರೆ ಹರಿಹರ, ಕುಮಾರವ್ಯಾಸ, ಲಕ್ಷ್ಮೀಶರವರು ಭಕ್ತಿ ಗ್ರಂಥಗಳನ್ನು ರಚಿಸುತ್ತಿದ್ದುದು ಭಕ್ತಿಯುಗದ ಪುಣ್ಯ ಸಂಪಾದನಾರ್ಥಿಗಳಾದ ಶ್ರೋತೃಗಳ

ಪಾರಾಯಣಕ್ಕೆ ಆದರೆ ಪು.ತಿ.ನ ಬರೆಯುವುದು ಆಧುನಿಕ ವೈಜ್ಞಾನಿಕ ಯುಗದ ಕಾವ್ಯಾಸಕ್ತ ಸಹೃದಯರಿಗೆ[1] ಇಂತಹ ವಿಭಿನ್ನ ಆಲೋಚನೆಯನ್ನು ಈ ಕೃತಿಯು ಒಳಗೊಂಡಿದೆ ಅಂದರೆ ಪರಂಪರೆಯ ಚಿತ್ರಣದ ಮೂಲಕ ಆಧುನಿಕತೆಯ ಸಂಸ್ಕೃತಿಯನ್ನು ಚಿಂತಿಸುತ್ತದೆ. ಕೃಷ್ಣನ ನಿರ್ಗಮನ, ಪರಂಪರೆ ನಿರ್ಗಮನದ ಚಿತ್ರಣವನ್ನು ನೀಡುತ್ತವೆ. ನಿರ್ಗಮನದ ನಂತರ ಆಧುನಿಕತೆಯ ಆಗಮನವನ್ನು ನಿರೀಕ್ಷಿಸುವಂತೆ ಮಾಡುತ್ತದೆ. 'ಗೋಕುಲ ನಿರ್ಗಮನ'ದ ಕೃಷ್ಣನ ಕೊಳಲು ಜಗತ್ತನ್ನೆ ಮರೆಯುವಷ್ಟು ಪುಣ್ಯ ನೀಡುವಂತಹ ಸಾಧನವಾಗುತ್ತದೆ.

ಭಯದ ಮಾಯೆ ಅಡಗುವಂತೆ
ಅಹಂಕಾರ ಕರಗುವಂತೆ
ನಿನ್ನ ಗಾನದನುರಾಗವು
ಬದುಕ ತುಂಬಲನುಗಾಲವು
ನಿಲ್ಲಿಸದಿರು ವನಮಾಲೀ
ಕೊಳಲ ಗಾನವ.

ಶ್ರೀ ಕೃಷ್ಣನ ಆರಾಧನೆಯನ್ನು ಈ ಕಾವ್ಯ ಉನ್ನತ ಮಟ್ಟದಲ್ಲಿ ಬಿಂಬಿಸುತ್ತ ಹೋಗುತ್ತದೆ. ಹಾಗೆಯೇ 'ಶ್ರೀಹರಿಚರಿತೆ' ಸಂಪೂರ್ಣ ಕೃಷ್ಣನ ಚರಿತೆಯೊಂದಿಗೆ, ಭಾಗವತದ ಸ್ವರೂಪದಂತೆಯೇ ರಚಿತವಾಗಿದೆ. ಜೊತೆಗೆ ತಾವೇ ಕಲ್ಪಿಸಿರುವಂತಹ ಕೆಲವು 'ಕೃಷ್ಣನ ಕಲ್ಪನೆ'ಗಳನ್ನು ಈ ಕೃತಿ ನೀಡುತ್ತಾ ಹೋಗುತ್ತದೆ. 'ಭಾಂದೀರ ದರ್ಶನ' ಮತ್ತು 'ರಾಧಕೃಷ್ಣ ಸಂಗತಿ' – ಈ ಎರಡೂ ಬಹುಶಃ ಮೂಲದಲ್ಲಿ ಇಲ್ಲದ ಹಾಗೂ ಕನ್ನಡದಲ್ಲಿ ಕೃಷ್ಣ ಕತೆಯೊಳಗೆ ಮೊಟ್ಟಮೊದಲಿಗೆ ಸೇರಿಕೊಂಡ ವಸ್ತುಗಳೆಂದು ತೋರುತ್ತದೆ. ಪು.ತಿ.ನ ಅವರ ಕೃತಿಯಲ್ಲಿ ವರ್ಣೀತವಾಗಿರುವ ಭಾಂಡೀರವೆಂಬ ಮಹಾವಟವೃಕ್ಷ ಬೃಂದಾವನದಲ್ಲಿರುವ ಒಂದು ಕರುಗಳ ರಾಜ. ನೆಲ ಮುಗಿಲುಗಳೆರಡನ್ನೂ ಹೀರಿಕೊಂಡು ಅಪ್ರತಿಮ ಜೀವೇಚ್ಛೆಯನ್ನು ಮೂರ್ತೀಕರಿಸುವಂತೆ ನಿಂತ ಮಹಾವೃಕ್ಷ ಮತ್ತು ಅದರ ಕೆಳಗೆ ಹಾಗೂ ಅದರ ಕೇಂದ್ರದಲ್ಲಿ ಬೆಳೆಯುವ ಗೋಪಾಲರ ಬದುಕು, ಶ್ರೀಕೃಷ್ಣನ ವ್ಯಕ್ತಿತ್ವಕ್ಕೆ ಒಂದು ಪ್ರತೀಕವಾಗಿದೆ. ಈ ಮಹಾವೃಕ್ಷವನ್ನು ಕಂಡು, ಅದನ್ನು ತನ್ನವರಿಗೆ ಪರಿಚಯಿಸಿ, ಅವರು ಅದನ್ನು ಪ್ರೀತಿಸುವಂತೆ ಆರಾಧಿಸುವಂತೆ ಮಾಡಿದವನು ಕೃಷ್ಣ. ಈ ಮಹಾವೃಕ್ಷದ ಏಕಾಂತತೆಯಲ್ಲಿ, ತನ್ನ ಸುಮಧುರ ವೇಣುವನ್ನು ಬಾರಿಸಿ ತನ್ನ ಆತ್ಮವನ್ನು ಇಡೀ ಬೃಂದಾವನದ ಮೇಲೆ ಹಾಯಿಸಿದವನು ಕೃಷ್ಣ ಹೀಗೆ ಈ ಮಹಾವೃಕ್ಷ ಒಂದು ಮರೆಯಲಾರದ ಪ್ರತೀಕವಾಗಿದೆ.

ರಾಧಾಕೃಷ್ಣರ ಸಂಗತಿ ತುಂಬಾ ಸೊಗಸಾಗಿ ಈ ಕೃತಿಯಲ್ಲಿ ನಿರೂಪಿತವಾಗಿದೆ. ವೇಣು ವಿಸರ್ಜನದ ನಂತರ ಕೃಷ್ಣನ ಕೊಳಲು ರಾಧೆಯ ಕೈಸೇರಿತೆಂಬುದು ಅತ್ಯಂತ ಅರ್ಥಪೂರ್ಣವಾಗಿದೆ. ಕೃಷ್ಣ ಬೃಂದಾವನವನ್ನು ಬಿಡುವಾಗ, ಅನಿವಾರ್ಯವಾದ ಅಗಲಿಕೆಯ ಹೊತ್ತಿನಲ್ಲಿ ರಾಧೆ ಓಡುತ್ತಾ ಬಂದು ತನ್ನ ಕೊರಳಿನ ಮುತ್ತಿನ ಏಕಾವಳಿಯನ್ನು ವನಮಾಲೆಯ ಸಹಿತ ರಾಧೆಯ ಕಡೆಗೆ ಎಸೆಯುತ್ತಾನೆ. ಪು.ತಿ.ನರ ಶ್ರೀ ಹರಿಚರಿತೆಯ ಮುಕ್ತಾಯದ ಸೊಗಸು ಇದು.[2]

---

[1] ಶ್ರೀಹರಿ ಚರಿತೆ : ಕೆಲವು ಪ್ರತಿಕ್ರಿಯೆಗಳು : ಲೇ ಜಿ.ಎಸ್.ಶಿವರುದ್ರಪ್ಪ ಪು. 141 ಗ್ರ : ಪು.ತಿ.ನ ನೂರರ ನೆನಪು

[2] ಶ್ರೀ ಹರಿ ಚರಿತೆ : ಕೆಲವು ಪ್ರತಿಕ್ರಿಯೆಗಳು. ಜಿ.ಎಸ್.ಶಿವರುದ್ರಪ್ಪ, ಪು : 143-144 ಗ್ರ: ಪು.ತಿ.ನ ನೂರರ ನೆನಪು

ಇವರಲ್ಲಿ ಇತರ ಕೃತಿಗಳಂತೆಯೇ ಇವರ ಅನೇಕ ಪ್ರಬಂಧಗಳ ಶ್ರೀವೈಷ್ಣವ ಸಂಪ್ರದಾಯದ ಆಚರಣೆಗಳು ತತ್ವಗಳೂ ಒಂದೊಂದು ತೆರೆದುಕೊಳ್ಳುತ್ತಾ ಹೋಗುತ್ತದೆ. ಈ ಒಂದು ಸತ್ವ ಭರಿತವಾದ ಪ್ರಬಂಧಗಳೂ ನಮಗೆ ನೀಡುವುದು ಹಳೆಯ ಪರಂಪರೆಯೊಡನೆ ಆಧುನಿಕ ಸಂಗತಿಗಳ ತಾದ್ಯಾತ್ಮಿಕೆಯನ್ನು ಇಂತಹ ಪ್ರಬಂಧಗಳು ಒಂದು ರೀತಿಯಲ್ಲಿ ಶ್ರೀವೈಷ್ಣವರ ಆತ್ಮೋನ್ನತಿಯ ದರ್ಶನ ಎನ್ನಬಹುದು. ಈ ಆತ್ಮೋನ್ನತಿಯ ದರ್ಶನವನ್ನು ಮುಂದಿನ ಅಧ್ಯಾಯ ಅಭ್ಯಸಿಸುತ್ತಾ ಹೋಗುವುದನ್ನು ನೋಡಬಹುದು.

ಹೀಗೆ ಪು.ತಿ.ನ ರವರ ಬದುಕು ಮತ್ತು ಬರಹ ಒಂದು ಧರ್ಮದ ಸಂಸ್ಕೃತಿಯೊಡನೆ ಬೆಳೆದು ಬಂದು, ಆ ಧರ್ಮದ ಪ್ರಭಾವದಲ್ಲಿ ಉನ್ನತ ವ್ಯಕ್ತಿತ್ವವನ್ನು ಪಡೆದು, ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿದೆ ಎನ್ನಬಹುದು.

### ಅ) ಶ್ರೀವೈಷ್ಣವ ತತ್ವ - ಜೀವನ ಸಿದ್ಧಾಂತ

ಯಾವುದೇ ಧರ್ಮದ ಅನುಯಾಯಿಗಳಿಗೆ ಆ ಧರ್ಮದ ತತ್ವ, ಸಿದ್ಧಾಂತಗಳು ಪ್ರಮುಖವಾಗುತ್ತವೆ. ಅದು ಅವರ ಜೀವನದ ಆಚರಣೆಗಳನ್ನೂ ಪರಿಸರಗಳನ್ನೂ ಒಳಗೊಂಡಿರುತ್ತವೆ. ಈಗಿನ ಆಧುನಿಕ ಯುಗದಲ್ಲಿ ಒಬ್ಬ ಸಂಪ್ರದಾಯಸ್ಥ ವೈದಿಕ ಬ್ರಾಹ್ಮಣ ಯಾವುದೇ ಆಚರಣೆಯಿಲ್ಲದೆ, ಆಧುನಿಕತೆಯನ್ನು ಒಳಗೂಡಿಸಿಕೊಂಡು, ಬಾಳುವಂತಹ ಸನ್ನಿವೇಶಗಳೇ ಇಂದು ಹೆಚ್ಚು, ಇಂದಿನ ಈ ಜಗತ್ತು ಇಂತಹ ಆಚರಣೆಗಳನ್ನೆಲ್ಲಾ ಹೊರಗೆಡವಿ, ತನ್ನದೇ ರೂಪುರೇಷೆಗಳನ್ನು ನಿರ್ಮಿಸಿಕೊಂಡು ಬದುಕು ನಡೆಸುತ್ತಿರುವುದನ್ನು ಕಾಣಬಹುದು. ಆದರೆ ಎಲ್ಲೋ ಒಂದು ಕಡೆ ಸಂಪೂರ್ಣ ಆಧುನಿಕತೆಗೆ ಸೋಲದ ಮನಸ್ಸು ಇನ್ನೂ ನಮ್ಮ ಸಂಸ್ಕೃತಿ, ಅದರ ಕೆಲವು ಆಚರಣೆಗಳನ್ನು ಉಳಿಸಿಕೊಂಡು, ಬೆಳೆಸುವಂತಹ ಪ್ರಯತ್ನವನ್ನು ಮಾಡುತ್ತಿದೆ. ಹಾಗೆಯೇ ಅತಿಯಾದ ಆಧುನಿಕತೆ ಮತ್ತೇ ಪರಂಪರೆಗೆ ಹಿಂದಿರುಗುವಂತೆ ಪ್ರೇರೇಪಿಸುತ್ತಿದೆ. ಅಂತಹ ಪ್ರಯತ್ನಗಳೆ ಇಂದಿನ ಮಠ- ಮಂದಿರಗಳ ಬೆಳವಣಿಗೆಗೆ ಸಹಕಾರಿಯಾಗುತ್ತಿದೆ. ಆದರೆ ಇದು ಎಂತಹ ಸಂಸ್ಕೃತಿಯನ್ನು ನೀಡುತ್ತಿದೆ ಎನ್ನುವುದನ್ನು ವಿಚಾರ ಮಾಡಬೇಕಾಗಿರುವುದು ನಮ್ಮ ವೈಚಾರಿಕ ಪ್ರಜ್ಞೆಗೆ ಬಿಟ್ಟಿದ್ದು.

ಪ್ರಾಚೀನ ಸಂಸ್ಕೃತಿಯನ್ನು ಉಳಿಸಿಕೊಳ್ಳುವಂತಹ ಪ್ರಯತ್ನದಲ್ಲಿರುವ ಸ್ಥಳಗಳಲ್ಲಿ ಅನೇಕ ಶ್ರಿವೈಷ್ಣವ ಸ್ಥಳಗಳೂ ಸೇರಿವೆ. ಅಂತಹ ಒಂದು ಪ್ರಮುಖ ಶ್ರೀವೈಷ್ಣವ ಸ್ಥಳ ಮೇಲುಕೋಟೆ. ಪು.ತಿ.ನ ಜನ್ಮ ತಾಳಿದ ಈ ಸ್ಥಳ ಒಂದು ರೀತಿಯಲ್ಲಿ ಕರ್ನಾಟಕದಲ್ಲಿ ಶ್ರೀವೈಷ್ಣವ ತತ್ವ ಆಚರಣೆಗಳ ಭದ್ರಕೋಟೆ. ಆದ್ದರಿಂದಲೆ ಇಲ್ಲಿ ಈಗಲೂ ಜನ ಒಂದು ಸಾಂಸ್ಕೃತಿಕವಾದ ನೆಲೆಗಟ್ಟಿನಲ್ಲಿ ಜೀವನ ನಡೆಸುತ್ತಿರುವುದನ್ನು ಕಾಣಬಹುದು. ಶ್ರೀ ರಾಮಾನುಜಾಚಾರ್ಯರು ಹನ್ನೆರಡು ವರ್ಷ ಮೇಲುಕೋಟೆಯಲ್ಲಿ ನೆಲೆಸಿ ಶ್ರೀರಂಗಕ್ಕೆ ಹಿಂತಿರುಗುವಾಗ ಅಲ್ಲಿನ ಜನಗಳು ಅವರನ್ನು ಬಿಟ್ಟಿರಲಾರದೆ ಅತ್ತಿದ್ದರಂತೆ ಆಗ ರಾಮಾನುಜರು ಅವರಿಗೆ ಸಮಾಧಾನ ಪಡಿಸಿ ಸುಮಾರು 52 ಕುಟುಂಬಗಳನ್ನು ದೇವಾಲಯದಲ್ಲಿ ಪೌರೋಹಿತ್ಯ ಮುಂತಾದ

ಕಾರ್ಯಗಳಿಗೆ ನೇಮಿಸಿ ತಾನು ಆಚಾರ್ಯ ರೂಪದಲ್ಲಿ ಇಲ್ಲಿಯೇ ನಿಂತು ನಿಮ್ಮನ್ನು ಆಗಾಗ ಬಂದು ಕಾಣುತ್ತೇನೆಂದು ಹರಸಿದರಂತೆ ಎನ್ನುವ ಕಥೆಗಳಿವೆ. ಈಗಲೂ ಆಚಾರ್ಯರೂಪದಲ್ಲಿ ರಾಮಾನುಜರು ಇಲ್ಲಿಯೇ ನೆಲೆನಿಂತಿರುವರೆಂಬ ನಂಬಿಕೆ ಇದೆ. ಆಗಿನಿಂದಲೂ ಈ ಕುಟುಂಬದ ತಲೆಮಾರುಗಳು, ನಾರಾಯಣ ಭಕ್ತರೂ ಈ ಸ್ಥಳದಲ್ಲಿ ನೆಲೆಸಿದ್ದಾರೆ, ರಾಮಾನುಜರನ್ನು ಸೇವಿಸುತ್ತಾ ಅವರ ಸಿದ್ಧಾಂತವನ್ನು ಗೌರವಿಸುತ್ತಾ ಬದುಕನ್ನು ನಡೆಸುವ ಜನರಿದ್ದಾರೆ. ಇವರ ಬದುಕಿನಲ್ಲಿ ಶ್ರೀವೈಷ್ಣವ ಆಚರಣೆಗಳೇ ಉಸಿರಾಗಿರುವುದನ್ನು ನಾವು ಗಮನಿಸಬಹುದು.

ಈ ಒಂದು ಜೀವನ ಸಿದ್ಧಾಂತವನ್ನು ಪು.ತಿ.ನ ರವರು ತಮ್ಮ ಸಾಹಿತ್ಯದಲ್ಲೂ ಅನೇಕ ಕಡೆ ನಿರೂಪಿಸುತ್ತಾರೆ. ರಾಮಾಯಣ, ಮಹಾಭಾರತ, ಭಾಗವತಗಳನ್ನು ತಮ್ಮ ಕಾವ್ಯ / ಪ್ರಬಂಧಗಳಿಗೆ ಅನ್ವಯಿಸುತ್ತಾರೆ ಹಾಗೂ ಅದರಿಂದಲೇ ಪು.ತಿ.ನ ರವರನ್ನು ಭಾಗವತ ಕವಿ ಎನ್ನುತ್ತಾರೆ.

ಅವರ ಅನೇಕ ಪ್ರಬಂಧಗಳ ವಸ್ತು ಈ ವಿಶಿಷ್ಟಾದ್ವೈತ ಸಿದ್ಧಾಂತ ಅದನ್ನು ನಂಬಿ ಬದುಕುವ ಜನ, ಅವರ ರೀತಿ ನೀತಿಗಳು, ಅಲ್ಲಿನ ಜನ ಬದುಕುವ ರೀತಿ ಅಚ್ಚರಿಯೆಂದರೆ ಪು.ತಿ.ನ ರ ಕಾಲಕ್ಕೆ ಹೇಗೊ ಹಾಗೆಯೇ ಈಗಿನ ಕಾಲದಲ್ಲೂ ಯದುಗಿರಿಯ ಬದುಕು, ಆಚರಣೆ ಎಲ್ಲವೂ ಶ್ರೀವೈಷ್ಣವರ ಸಂಪ್ರದಾಯದಂತೆ ನಡೆಯುವುದು ಒಂದು ವಿಶೇಷ.

"ಶ್ರೀವೈಷ್ಣವ ಸಿದ್ಧಾಂತದ ಪ್ರಕಾರ ಭಕ್ತನಾಗಲಿ, ಪ್ರಸನ್ನನಾಗಲೀ ತನ್ನ ಪರಮ ನಿಷ್ಠೆಗೆ ಸ್ವಲ್ಪವೂ ಕುಂದುಂಟಾಗದಂತೆ, ತನ್ನ ಪುರುಷಾರ್ಥಕ್ಕನುಗುಣವಾಗುವಂತೆ ತನ್ನ ಬಾಳನ್ನು ಬಾಳಬೇಕು. ತನ್ನಿಂದ ಒಬ್ಬರಿಗೂ ನೋವಾಗದಂತೆ, ಧರ್ಮಕ್ಕೆ ವಿರೋಧವಾಗದಂತೆ ಸಾಂಸಾರಿಕ ಸುಖವನ್ನು ಅನುಭವಿಸಬೇಕು. ಹಾಗೆಯೇ ಪ್ರಾತಃಕಾಲದಲ್ಲಿ ಏಳುವುದರಿಂದ ಮಲಗುವವರೆಗೆ ನಡೆದುಕೊಳ್ಳಬೇಕಾದ ಕರ್ತವ್ಯಗಳನ್ನು ಐದು ಭಾಗವನ್ನಾಗಿ ಮಾಡಿ ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ ಮತ್ತು ಯೋಗ ಎಂಬುದಾಗಿ ವಿಂಗಡಿಸಿಕೊಳ್ಳುತ್ತಾರೆ.

ಸ್ನಾನಾದಿಕೃತ್ಯಗಳನ್ನು ನೆರವೇರಿಸಿ ಪ್ರಾತಃಕಾಲದಲ್ಲಿ ಭಗವಂತನನ್ನು ಪೂಜಿಸುವುದು ಅಭಿಗಮನ; ಇವುಗಳ ನಂತರ ಭಗವದ್ಭಾಗವತರ ಆರಾಧನೆಗೆ ಬೇಕಾದ ದ್ರವ್ಯಗಳನ್ನು ಸಂಪಾದಿಸುವುದು ಉಪಾದಾನ; ಮಧ್ಯಾಹ್ನದ ಕಾರ್ಯಗಳು ಇಜ್ಯಾ; ಜ್ಞಾನಾರ್ಜನೆ ನಡೆಯುವ ಕಾಲ ಸ್ವಾಧ್ಯಾಯ; ಸಾಯಂ ಸಂಧ್ಯಾವಂದನೆ, ಭಗವಂತನ ಸ್ತೋತ್ರ ಪಾರಾಯಣ ಆಹಾರ ಸ್ವಿಕಾರ ಮಾಡಿದ ಮೇಲೆ ಪರಮಾತ್ಮನ ಸ್ವರೂಪವನ್ನು - ಸ್ವಸ್ವರೂಪವನ್ನು ಅನುಸಂಧಾನ ಮಾಡುವುದು ಯೋಗ ಎಂದೆನಿಸಿಕೊಳ್ಳುತ್ತದೆ.

ಹಾಗೆಯೇ ಶ್ರೀವೈಷ್ಣವನು ಪಂಚ ಸಂಸ್ಕಾರವನ್ನು ಹೊಂದಿರಬೇಕೆಂದು ಹೇಳುತ್ತಾರೆ. ಇವು "ತಾಪೋ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮ" ಎಂಬುದಾಗಿವೆ. ತಾಪೋ ಎಂದರೆ ಸುದರ್ಶನ ಚಕ್ರ ಮತ್ತು ಪಾಂಚಜನ್ಯದ ಮುದ್ರಾಧಾರಣೆ; ವೈಷ್ಣವತ್ವ ಸೂಚಿಸುವ ಚಿಹ್ನೆ ಪುಂಡ್ರಾ; ಇದನ್ನು ಧರಿಸಿಯೇ ಎಲ್ಲಾ ಕಾರ್ಯಗಳನ್ನು ಮಾಡುವಂತಹುದು, ನಾಮವೆನ್ನುವುದು ಹೆಸರನ್ನು ಸೂಚಿಸುವಂತಹದು; ಮಂತ್ರಗಳನ್ನು ಆಚಾರ್ಯರಿಂದ ಉಪದೇಶಿಸಿಕೊಂಡು ನಿರಂತರವಾಗಿ

ಅನುಸಂಧಿಸುವಂತಹುದು; ಭಗವಂತನ ಪೂಜೆಯೇ ಯಾಗ - ಈ ಐದು ಇದಕ್ಕಿಂತ ಶ್ರೇಷ್ಠವಾದುದು ಶ್ರೀವೈಷ್ಣವನಿಗೆ ಯಾವುದು ಇಲ್ಲ ಎನ್ನುತ್ತದೆ ರಾಮಾನುಜ ಸಿದ್ಧಾಂತ.[1]

ಈ ಸಿದ್ಧಾಂತಗಳ ಆಚರಣೆಗಳು ಪ್ರಚಲಿತದಲ್ಲಿರುವ ಶ್ರಿವೈಷ್ಣವ ಕ್ಷೇತ್ರಗಳು ದಕ್ಷಿಣ ಭಾರತದಲ್ಲಿ ಹಲವಾರಿವೆ. ತಿರುಪತಿ, ತಿರುಮಲೆ, ಶ್ರೀರಂಗ, ಶ್ರೀರಂಗಪಟ್ಟಣ, ಮಾಗಡಿ, ಮೇಲುಕೋಟೆಯಲ್ಲೆಲ್ಲಾ ಇಂತಹ ಸಿದ್ಧಾಂತಗಳ ಆಚರಣೆಯನ್ನು ಈಗಲೂ ಕಾಣುತ್ತೇವೆ. ಹಾಗಾದರೆ ಇಲ್ಲಿ ಆಧುನಿಕತೆ ತಲೆಹಾಕಿಲ್ಲವೆ ಎಂದರೆ, ಆಧುನಿಕತೆ ಮತ್ತು ಪ್ರಾಚೀನ ಪರಂಪರೆಯ ಸಂಯೋಜನೆಗಳನ್ನು ಇಲ್ಲಿ ಕಾಣುತ್ತೇವೆ. ಇಂತಹ ಸಿದ್ಧಾಂತಗಳು ಒಂದು ಪರಂಪರೆಯನ್ನು ನೆಲೆಗೊಳಿಸುವಂತಹ ಕೆಲಸಗಳನ್ನು ಸ್ವಯಂಪೂರ್ಣವಾಗಿ ಮಾಡುತ್ತಿರುತ್ತದೆ. ಸಾಹಿತ್ಯ ಕ್ಷೇತ್ರದ ದಿಗ್ಗಜರಲ್ಲಿ ಎಷ್ಟು ಶ್ರೀವೈಷ್ಣವರಿದ್ದಾರೊ ಅವರೆಲ್ಲರ ಹಣೆಯಲ್ಲೂ ನಾವು ನಾಮವನ್ನು ಕಾಣುತ್ತೇವೆ. ಅದು ಒಂದು ಪರಂಪರೆಯ ಸಂಕೇತವೇ ಹೊರತು ಆಚಾರವೊಂದರ ಗುಲಾಮತನ ಎಂದು ಭಾವಿಸಲಾರರು.

ಹಾಗೆಯೇ ಒಬ್ಬ ಶ್ರೀವೈಷ್ಣವ ವೈದ್ಯ, ವಿಜ್ಞಾನಿ ಅಥವಾ ಮತ್ತಾವುದೇ ಉದ್ಯೋಗಿಯಾಗಲಿ ಶೇ 50% ರಷ್ಟಾದರೂ ಇದನ್ನು ಪಾಲಿಸುವ ಮನೋಭಾವ ಹೊಂದಿದವರಾಗಿರುತ್ತಾರೆ. ಇದು ಒಂದು ಸಂಸ್ಕೃತಿ ಒಬ್ಬ ವ್ಯಕ್ತಿಯ ಮೇಲೆ ಮಾಡುವ ತೀವ್ರವಾದ ಪ್ರಭಾವ ಎನ್ನಬಹುದು. ಇಂತಹ ಸಂಸ್ಕೃತಿಯ ಆಚರಣೆಯ ಅನುಸರಣೆ ತಮ್ಮನ್ನು ತಾವು ಗುರುತಿಸಿಕೊಳ್ಳುವುದರಲ್ಲಿಯೂ ಯಶಸ್ವಿಯಾಗುತ್ತದೆ.

ಇಂತಹ ದರ್ಶನದ ಜೀವನ ಮೇಲುಕೋಟೆಯಲ್ಲಿ ಮೂಲಭೂತವಾದ ನೆಲೆಯಲ್ಲಿ ನಿಂತಿರುವುದನ್ನು ಕಾಣುತ್ತೇವೆ. ಇದೊಂದು ಶ್ರೀವೈಷ್ಣವರ ಸಾಂಸ್ಕೃತಿಕ ನಗರಿ. ಇಲ್ಲಿ ನಡೆಯುವ ಉತ್ಸವಗಳಿಗೆ ಅದರವೇ ಆದ ಚರಿತ್ರೆಯಿದೆ ಅದರದ್ದೆ ಆದ ರಂಗಿದೆ. ಇಂತಹ ಉತ್ಸವಗಳ ನಗರಿಯ ಜೀವನ ಈಗಲೂ ಸಿದ್ಧಾಂತಮಯವಾಗಿಯೇ ಇರುವುದು ಅಚ್ಚರಿಯೇನಲ್ಲ, ಈ ಶಾಸ್ತ್ರ, ಸಂಪ್ರದಾಯಗಳ ಆಚರಣೆಗಳ ಕುರಿತು ಪು.ತಿ.ನ ರವರೇ ತಮ್ಮ ಪ್ರಬಂಧ 'ಬಲಕಿವಿ'ಯಲ್ಲಿ ಈ ರೀತಿ ಹೇಳುತ್ತಾರೆ.

"ಸಂಧ್ಯಾವಂದನೆ ಮಾಡುವಾಗ ಸಂಕಲ್ಪಕ್ಕೆ ಕುಳಿತುಕೊಂಡರೆ ಕೈ ಮೂಗಿನ ಮೇಲಕ್ಕೆ ಹೋಯಿತು ಆ ಮೇಲೆ ಇದ್ದಕ್ಕಿದ್ದ ಹಾಗೆಯೇ ಬಲಕಿವಿ ಮುಟ್ಟಿತು". ಈ ವರ್ತನೆಗೆ ಆಶ್ಚರ್ಯ ಪಟ್ಟು ಯೋಚಿಸಿದಾಗ 'ಪ್ರಾಣವನ್ನು ನಿಯಮಿಸುವುದಕ್ಕೆ ಕೈ ಮೂಗನ್ನು ಹಿಡಿದುಕೊಳ್ಳುವುದೇನೊ ಅವಶ್ಯಕ? ಆದರೆ ಬಲ ಕಿವಿಯನ್ನೇಕೆ ಮುಟ್ಟಬೇಕು? ಇದಕ್ಕೇನು ಅರ್ಥ? ಹೀಗೆ ಯೋಚಿಸುವಾಗ 'ವಾಮಂ ಕರ್ಣಂ ದಶಸ್ಪಮೇ' ಎಂಬ ಚಾಟು ಶ್ಲೋಕ ಜ್ಞಾಪಕಕ್ಕೆ ಬಂದು ನನ್ನ ಸಂದೇಹ ಅಂತಃಸ್ಮಿತದೊಡನೆ ಪರಿಹಾರವಾಯಿತು. ಮೂಗು ಅಶುದ್ಧ, ಕಿವಿ ಶುದ್ಧ - ಅಲ್ಲಲ್ಲ, ಬಲ ಕಿವಿ ಶುದ್ಧ - ಎಡ ಕಿವಿಗೆ ಈ ಪಾರಿಶುದ್ಧವಿಲ್ಲ. ಏಕೆಂದರೆ ಅದಕ್ಕೆ ಮಂತ್ರಗ್ರಹಣದ ಗೌರವವಿಲ್ಲ. ಮುಖದಲ್ಲಿಯೇ ಒಂದು ಶುದ್ಧ,

---

[1] ರಾಮಾನುಜ ದರ್ಶನ ಸ್ವರೂಪ – ಎನ್.ಎಸ್. ಅನಂತರಂಗಾಚಾರ್ ಪು.237-241

ಇನ್ನೊಂದು ಅಶುದ್ಧ ನಮಗೆ ಹೀಗಿರುವಾಗ ನಮ್ಮ ಮಡಿ ಮೈಲಿಗೆಯ ಶಾಸ್ತ್ರ ಮತ್ತು ಸುತ್ತಾ ಜಗತ್ತಿಗೂ ವ್ಯಾಪಿಸಿರುವುದರಲ್ಲೂ ಏನಾಶ್ಚರ್ಯ[1]

ಈ ವಾಕ್ಯಗಳನ್ನು ಗಮನಿಸಿದಾಗ ಪು.ತಿ.ನ ತಮ್ಮ ಸಂಪ್ರದಾಯ ಆಚರಣೆಗಳಿಗೆ ಎಷ್ಟು ಬದ್ಧರಾಗಿದ್ದರು ಎಂಬುದು ವಿಶದವಾಗುತ್ತದೆ. ಅವರು ಸೈನ್ಯ ವಿಭಾಗದಲ್ಲಿ ಕೆಲಸದಲ್ಲಿದ್ದು ಪಾಶ್ಚಾತ್ಯರ ಒಂದು ಅನುಸಂಪರ್ಕವಿದ್ದರೂ ತಮ್ಮ ಆಚರಣೆಗಳನ್ನು ಬಿಡದಿರುವುದು ಒಂದು ಅಚ್ಚರಿಯ ಸಂಗತಿಯೇ. ಇದೇ ರೀತಿಯ ಇನ್ನೊಂದು ಹೇಳಿಕೆಯನ್ನೂ "ವಸಂತ ಚಂದನೋತ್ಸವ" ಎಂದು ಪ್ರಬಂಧದಲ್ಲಿ ಗಮನಿಸಬಹುದು. ವಸಂತ ಮಾಸದಲ್ಲಿ ನಡೆಯುವ ಉತ್ಸವ ಇದು. ಗಿಡ-ಮರ ಬಳ್ಳಿಗೆಲ್ಲಾ ವಸಂತನ ಆಗಮನವಾಗಿ ಚಂದವಾಗಿ ನಗುನಗುತ್ತಾ ನಿಂತಿರುವಾಗ, ಆ ಮರಗಳಿಗೆ ನಡೆಯುವಂತಹ ಉತ್ಸವ. ಇಂತಹ ಉತ್ಸವದಲ್ಲಿ ಭಾಗವಹಿಸುವಾಗ ಪು.ತಿ.ನ ರವರಿಗೆ ನಿಷ್ಠಾವಂತ ವೈದಿಕರೊಡನೆ ಬಂದ ತೆರನಾದ ಒಬ್ಬಂಟಿತನ ಕಾಡುತ್ತದೆ. ಆಗ ಆ ಒಂಟಿತನದ ಬಗ್ಗೆಯೇ ಚಿಂತಿಸುತ್ತಿರುವಾಗ ತೆಂಕಣಗಾಳಿಗೆ ಸೋಲುತ್ತಾರಂತೆ ಪಂಪ ಕವಿಯಂತೆ, ಪಂಜೆಮಂಗೇಶರಾಯರಂತೆ ಹಾಗೇ ಸೋತಾಗ ಅವರಿಗೆ ಅನ್ನಿಸುವುದು ಹೀಗೆ.

"ನನಗೆ ಈಗ ವಸಂತದ ಜುಮ್ಮು ತಟ್ಟಿದೆ; ಒಂದು ಹುಚ್ಚು ಬಯಕೆ ಹತ್ತಿದೆ. ಈ ವಸ್ತ್ರವಿನ್ಯಾಸಗಳನ್ನೆಲ್ಲಾ ಕಳೆದು ಬಿಸುಟು, ನವಿರು ಪಂಚೆಯ ಕಚ್ಚೆಯನ್ನುಟ್ಟು, ವಲ್ಲಿಯನ್ನು ಕುಚ್ಚುಬಿಟ್ಟು ಸೊಂಟಕ್ಕೆ ಕಟ್ಟಿ, ಗಂಧಪುಷ್ಪಾದಿಗಳಿಂದ ಅಲಂಕೃತನಾಗಿ, ಬೆಳ್ಳಿಯ ದೊಡ್ಡ ಬಟ್ಟಲಿನಲ್ಲಿ ಕೇಸರಿಯ ಶ್ರೀಚಂದನದ ರಸವನ್ನು ತುಂಬಿಕೊಂಡು ಕೆಲವು ರಸಿಕ ಸ್ನೇಹಿತರೊಡನೆ ವಸಂತೋದಯದ ಗೀತವನ್ನು ವಾದ್ಯ ಮದ್ದಳೆಗಳ ಜತೆಗೆ ಈ ಹಕ್ಕಿಗಳ ಹಾಗೆ ಹಾಡುತ್ತಾ ಕಂಡ ಕಂಡವರಿಗೆ ಶುಭಶುಭವೆಂದು ಗಂಧವನ್ನು ಈ ತೆಂಗಾಳಿಯ ಹಾಗೆ ನೀಡುತ್ತಾ ಈ ಊರಿನ ಬೀದಿಗಳಲ್ಲಿ ಏಕೆ ಮೆರವಣಿಗೆ ಹೊರಡಬಾರದೆಂದು[2]. ಹೀಗೆ ಹಲವಾರು ಪ್ರಬಂಧಗಳಲ್ಲಿ ತಮ್ಮ ಸಂಪ್ರದಾಯ, ಆಚರಣೆಗಳನ್ನೆಲ್ಲಾ ಹೇಳುತ್ತಾ ಅನುಭವಿಸುತ್ತಾ ಹೋಗುತ್ತಾರೆ.

ಇದೇ ನಾಮದ ಬಗ್ಗೆಯೂ ತಿರುನಕ್ಷತ್ರದಲ್ಲಿ ಒಂದು ಹಾಸ್ಯಸನ್ನಿವೇಶವನ್ನು ಹೇಳುತ್ತಾರೆ. ಫರಂಗಿಯುವನೊಬ್ಬ ಆಫೀಸರಾಗಿ ಉತ್ತರದೇಶದಿಂದ ದಕ್ಷಿಣದೇಶದ ಕಛೇರಿಯೊಂದಕ್ಕೆ ಬಂದನಂತೆ, ವೈದಿಕನಾಗಿ ಲೌಕಿಕ ಜೀವನವನ್ನು ನಡೆಸುತ್ತಿದ್ದ ಗುಮಾಸ್ತನೊಬ್ಬನು ಪಟ್ಟೆ ಪಟ್ಟೆಯ ನಾಮವನ್ನಿಟ್ಟುಕೊಂಡು ಆತನ ಮುಂದೆ ಬಂದು ನಿಂತನಂತೆ. ಮೊದಲದಿನ ಸುಮ್ಮನಿದ್ದನಂತೆ, ಎರಡನೇ ದಿನ ಗುಮಾಸ್ತ ಹಾಗೆಯೇ ಬರಲು ಸಾಹೇಬ "I can allow

[1] ಬಲ ಕಿವಿ - ಪು.ತಿ.ನ ಸಮಗ್ರ ಗದ್ಯಸಂಪುಟ - ಪು.104

[2] ವಸಂತ ಚಂದನೋತ್ಸವ : ಪು.95

you the Privilege of observing Moharom for only one day in the year and not every day" ಎಂದನಂತೆ ನಾಮ ಎಂದರೆ ನಮ್ಮಾಳ್ವಾರ್ ಎಂದು ಆ ಪರದೇಶಿಗೆ ತಿಳಿಯಬೇಕಲ್ಲ[1].

ಇದಲ್ಲದೇ ಅನೇಕ ಪ್ರಬಂಧಗಳಲ್ಲಿ ಇಂತಹ ಅನೇಕ ಆಚರಣೆಗಳ ಬಗ್ಗೆ ಪ್ರಸ್ತಾಪಿಸುತ್ತಾ ಶ್ರೀವೈಷ್ಣವ ತತ್ತ್ವದಂತೆ ನಡೆಯುವ ಜೀವನ ಸಿದ್ಧಾಂತವನ್ನು ಬಿಂಬಿಸುತ್ತಾರೆ. ಆದರೆ ಅದೇ ಸಿದ್ಧಾಂತವನ್ನು ಬಹಳ ಆಧುನಿಕ ಪರಂಪರೆಯಿಂದ ನೋಡುವಂತಹ ದೃಷ್ಟಿಕೋನವನ್ನು, ಅದನ್ನು ಬಹಿರಂಗಪಡಿಸುವಂತಹ ಕಲೆಯೂ ಅದ್ಭುತವಾಗಿದೆ.

ಬಲಕಿವಿ ಪ್ರಬಂಧದಲ್ಲಿ ಶಾಸ್ತ್ರದ ಪರವಾಗಿಯೇ ಇರುವಂತಹ ಪು.ತಿ.ನ ರವರು ಮುಂದುವರೆಯುತ್ತಾ ಈ ರೀತಿಯ ಪ್ರಾಚೀನ ಸಂಪ್ರದಾಯ ಆಚರಣೆಗಳು ಮಡಿವಂತಿಕೆಯಾಗಿ ಬೆಳೆದಾಗ ವ್ಯಕ್ತಿತ್ವವೇ ಕುಂದಿಹೋಗುವ ಪರಿಸ್ಥಿತಿ ಉಂಟಾಗುತ್ತದೆ. ಇಂತಹ ಮಡಿವಂತಿಕೆಯಿಂದ ಪಾರಾಗಲು ಹೊಸತನವೊಂದು ಬೇಕಾಗುತ್ತದೆ. ಭಾರತೀಯರ ಇಂತಹ ಮಡಿವಂತ ಕಾಲಕ್ಕೆ ಬಂದದ್ದು ಪಾಶ್ಚಾತ್ಯಮಂತ್ರ. ಈತ ಮಂತ್ರ ಅಲ್ಲ ತಂತ್ರ ಎನ್ನುತ್ತಾರೆ. ಆತ ತಂದ ತಂತ್ರ ಒಂದು ಪರಂಪರೆಯೇ ಬದಲಾಗಿ ಜ್ಞಾನಾರ್ಜನೆ ಒದಗಿತು. ಇದರಿಂದ ಸ್ವರಾಜ್ಯ ಸಿಕ್ಕಿತು. ವ್ಯಕ್ತಿತ್ವಕ್ಕೆ ಹೊಸಮೆರುಗೂ ಬಂತು ಆದರೆ ಇದು ಅತಿಯಾಗಿ ಇಂದು ಪರತಂತ್ರ ಮೋಹವಾಗಿರುವುದನ್ನು ಪ್ರಸ್ತಾಪಿಸುತ್ತಾರೆ. ಇಂತಹ ಅತಿಭಾವನೆಯ ತಾರಕಗಳಿಗೆ ಮತ್ತೊಂದು ತಾರಕ ಮಂತ್ರಬೇಕು ಎನ್ನುತ್ತಾರೆ.

ಇದು ನಮ್ಮ ಪರಂಪರೆಯಲ್ಲಿರುವ "ನಮೋ ಋಷಿಭ್ಯ ಪೂರ್ವೇಭ್ಯಃ" ಎಂಬ ಮಂತ್ರ, ಅದೇ ಅಂತಹ ತಾರಕಮಂತ್ರ. ಇದೇ Discovery of India ಎನ್ನುತ್ತಾರೆ. ಅಂದರೆ ಇವರ ಪ್ರಕಾರ ಯಾವ ಸಂಸ್ಕೃತಿಯ ಆಚರಣೆಗಳೂ ಅತಿಯಾಗಬಾರದು. ಅತಿಯಾದರೆ ಅಮೃತ ವಿಷವಾದಂತೆ. ಆದರೆ ಅದರ ಸತ್ವಗಳು ಜೀವನ ಸಿದ್ಧಾಂತಗಳಾಗಿ ಜೀವಂತವಾಗಿರಬೇಕು. ನಮಗೆ ತಿಳಿಯದ ಎಲ್ಲಾ ತಂತ್ರಗಳನ್ನು ಬೇರೆಯವರಿಂದ ಕಲಿಯೋಣ. ಆದರೆ ಆತ್ಮಶಾಸ್ತ್ರಕ್ಕೆ ನಮ್ಮ ಮಂತ್ರವನ್ನು ಉಸಿರಾಗಿಸೋಣ ಎನ್ನುತ್ತಾರೆ. ಇಂತಹ ಒಂದು ಆಲೋಚನೆ ಒಬ್ಬ ಉತ್ತಮ ಆಚಾರವಂತನಿಗೆ ಮಾತ್ರ ಮೂಡಲು ಸಾಧ್ಯ. ಇಂತಹ ಆಲೋಚನಾ, ಜೀವನ ಸಿದ್ಧಾಂತಗಳಿಂದಲೇ ಪು.ತಿ.ನರವರು ಸಾಹಿತ್ಯಕ್ಷೇತ್ರದ ದಿಗ್ಗಜರಲ್ಲಿ ಪ್ರತ್ಯೇಕವಾಗಿ ನಿಲ್ಲುತ್ತಾರೆ ಎನ್ನಬಹುದು.

ಒಬ್ಬ ಸಾಹಿತಿಯ ಲಕ್ಷಣವನ್ನು ಪು.ತಿ.ನ ಹೀಗೆ ವಿವರಿಸುತ್ತಾರೆ.

"ನನಗೆ ತಿಳಿದ ಮಟ್ಟಿಗೆ ಆತ ಸಮತಾಭಾವವನ್ನೂ ಹೊಂದಿರಬೇಕು, ಶಮಸಂಪನ್ನನಾಗಿರಬೇಕು ನಿರ್ವೈರತೆಯಿಂದ ಕೂಡಿ ಸರ್ವಭೂತ ಹೃದಯನಾಗಿರಬೇಕು. ಇದರಲ್ಲೂ ಮುಖ್ಯವಾದದ್ದು ಸರ್ವಭೂತ ಹೃದಯತ್ವ. ಇದನ್ನು ಪಡೆಯಬೇಕಾದರೆ ಆತ ಮೂರು ಸಾಹಸಗಳಲ್ಲಿ ತೊಡಗಿ ಅದಷ್ಟು ಸಿದ್ಧಿ ಪಡೆಯಬೇಕು. ಸ್ವಕೇಂದ್ರ ಮುಕ್ತಿ, ಅನುಪೇತತ್ವ, ಆದೇಶ ಕೃತ್ಯತ್ವ – ಎಂದರೆ ತನ್ನನ್ನು ತಾನು ಬಿಟ್ಟು ಹೊರಡುವುದು, ಪೂರ್ವಾಗ್ರಹಗಳನ್ನು

---

[1] ತಿರುನಕ್ಷತ್ರ: ಪು.99

ಬಿಸುಡುವುದು, ಮತ್ತು ಕುಲಕ್ರಮಾಗತ ಕಟ್ಟು ಕಟ್ಟಲೆ ಕರ್ಮಾದಿಗಳಿಂದ ಬಿಡುಗಡೆ ಹೊಂದಿರುವುದು. ಇಂಥ ಶುದ್ಧ ಮನಸ್ಸಿಗೆ ಮಾತ್ರ ಸರ್ವಭೂತ ಹೃದಯತ್ವ ಸಿದ್ಧಿಸುತ್ತದೆ. ಕವಿಗೆ ಬೇಕಾದ ತಾದಾತ್ಮ್ಯ ಕೌಶಲವನ್ನು ಆತ ಪಡೆದುಕೊಳ್ಳುತ್ತಾನೆ[1] ಈ ಮಾತುಗಳೇ ಅವರ ಜೀವನ ಸಿದ್ಧಾಂತದ ದರ್ಶನ ಮಾಡಿಸುತ್ತದೆ. ಎಲ್ಲವನ್ನೂ ಕುರುಡಾಗಿ ಒಪ್ಪಿಕೊಳ್ಳದೇ, ಎಲ್ಲದರ ಸಾರವನ್ನು ಮೂಡಿಸಿಕೊಂಡು ಸಮತೆಯಿಂದ ಕೂಡಿರುವಂತಹುದು. ಇಂತಹ ಸಾರ ಹೃದಯದ ಸಿದ್ಧಾಂತಗಳೇ ಅವರ ವ್ಯಕ್ತಿತ್ವಕ್ಕೆ ಮಾದರಿ ಎಂದು ಬಣ್ಣಿಸಬಹುದು.

## (ಆ) ಗೋಕುಲಾಷ್ಟಮಿ – ರಥಸಪ್ತಮಿ – ಮಳೆ - ನಾರಾಯಣ ಗುಡಿಯಲ್ಲಿ - ಕೊಳಂದೆ – ಈಚಲು ಮರದಕೆಳಗೆ ಪ್ರಬಂಧಗಳ ಶ್ರೀವೈಷ್ಣವ ದರ್ಶನ

ಪು.ತಿ.ನ ರವರ ಜೀವನ ಮಾರ್ಗದಲ್ಲಿ ವಿಶಿಷ್ಟಾದ್ವೈತ ಎಷ್ಟು ಪ್ರಭಾವವನ್ನು ಬೀರಿತ್ತು ಎಂಬುದನ್ನು ನೋಡುತ್ತಾ ಬರುತ್ತಿದ್ದೇವೆ. ಇಂತಹ ಸಿದ್ಧಾಂತಗಳ ನೆರಳಿನಲ್ಲಿ ಮೂಡಿ ಬಂದ ಅನೇಕ ಪ್ರಬಂಧಗಳನ್ನು ಪು.ತಿ.ನ ರವರ ಬರವಣಿಗೆಯಲ್ಲಿ ಗಮನಿಸಬಹುದು. ಶ್ರೀವೈಷ್ಣವ ತತ್ವವೇ ಸಿದ್ಧಾಂತವಾಗಿರುವುದು ಗೋಕುಲಾಷ್ಟಮಿ ಪ್ರಬಂಧದಲ್ಲಿ ಪು.ತಿ.ನ ಆಧುನಿಕ ಕೃಷ್ಣಭಕ್ತ, ಈ ಪರಮ ಭಾಗವತ ಪ್ರಿಯ, ಕೃಷ್ಣನೇ ಈ ಕೃತಿಯ ನಾಯಕ. ಕೃಷ್ಣನ ಬಾಲ್ಯ ಜೀವನವು ಇಡೀ ಭಾಗವತ ಲೋಕದಲ್ಲಿ ಅದ್ಭುತ ರಸವನ್ನು ನೀಡುವ ಕಥಾನಕಗಳನ್ನು ಒಳಗೊಂಡಿದೆ. ವಿಭಿನ್ನ ಕೃಷ್ಣ ಚರಿತೆ ಭಾಗವತ ಪ್ರಿಯರಿಗೆ ಆತ್ಮೋನ್ನತಿಯನ್ನುಂಟು ಮಾಡುವ ರಸಘಳಿಗೆಗಳು. ವೈಷ್ಣವ ಮತಸ್ಥರಿಗೆ ಕೃಷ್ಣ ರಸದೌತಣ. ನಮ್ಮ ದಾಸರ ಕೀರ್ತನೆಗಳು ಇಂತಹ ಒಂದು ಆರಾಧನೆಯಲ್ಲಿ ಮೂಡಿಬಂದಿರುವಂತಹುದು. ಪು.ತಿ.ನ ಅವರ ಅನೇಕ ಕೃತಿಗಳು ಶ್ರೀ ಕೃಷ್ಣನ ಚರಿತ್ರೆಯನ್ನೇ ಒಳಗೊಂಡು, ಆಧ್ಯಾತ್ಮಿಕತೆಯನ್ನು ಮೂಡಿಸುತ್ತದೆ, ಭಕ್ತಿ ರಸತಾಣವಾಗಿ ಮೂಡುತ್ತವೆ. ಆ ಭಕ್ತಿ ಕೃಷ್ಣಜನ್ಮಾಷ್ಟಮಿಯಲ್ಲಿ ಮೂಡಿದ ಭಾವ ವಿಶೇಷಕತೆಗಳನ್ನು ಕೆಲವು ಚಿತ್ರಗಳ ಮೂಲಕ ಕಣ್ಣಿಗೆ ಕಟ್ಟಿಕೊಡುವುದೆ 'ಗೋಕುಲಾಷ್ಟಮಿ' ಪ್ರಬಂಧದ ವಿಶೇಷತೆ ಎನ್ನಬಹುದು.

ಶ್ರೀವೈಷ್ಣವರ ಪರಮದೈವ ಶ್ರೀಕೃಷ್ಣ. ಈತನ ಜನ್ಮಾಷ್ಟಮಿಯನ್ನು ವಿಶೇಷ ರೀತಿಯಲ್ಲಿ ಆಚರಿಸುವ ಇವರು, ಆ ದಿನವನ್ನು, ಆ ಹಬ್ಬದ ಆಚರಣೆಯನ್ನು ವಿಜೃಂಭಣೆಯಲ್ಲಿ ನೆರವೇರಿಸುತ್ತಾರೆ. ಎಂತಹ ಬಡವನಾದರೂ ಜನ್ಮಾಷ್ಟಮಿಯನ್ನು ತನ್ನದೇ ಆದ ರೀತಿಯಲ್ಲಿ ಆಚರಿಸುತ್ತಾನೆ. ಈ ಹಬ್ಬದ ವಿಶೇಷತೆಗಳನ್ನು ಪು.ತಿ.ನ ರವರು ತಮ್ಮದೇ ಶೈಲಿಯಲ್ಲಿ ಬಣ್ಣಿಸುತ್ತಾ ಹೋಗುತ್ತಾರೆ.

ಗೋಕುಲಾಷ್ಟಮಿ ಹಬ್ಬ ನಮಗೆ ದೊಡ್ಡ ಹಬ್ಬ ಎಂದು ಹೇಳುವ ಪು.ತಿ.ನ ರವರು ಆ ಹಬ್ಬದ ಆಚರಣೆಯ ನಾಯಕ ಪುರಾಣಪುರುಷ, ಮಹಾಭಾರತ ವ್ಯಕ್ತಿ, ಗೀತಾಚಾರ್ಯನು ಅವತರಿಸಿದ ಪವಿತ್ರವಾದ

[1] ಮೆಲುಕು: ಸಮಗ್ರ ಕವನಗಳು ಪು.15 ಲಿಪಿ ಪು. 1988

ಪುಣ್ಯಮಯವಾದ ದಿನವೆನ್ನುತ್ತಾರೆ. ಈ ಅಷ್ಟಮಿಯ ಪೂಜೆ ನಡೆಯುವುದು ಅರ್ಧರಾತ್ರಿಯಲ್ಲಿ. ಕಾರಣ ಶ್ರೀಕೃಷ್ಣ ಜನಿಸಿದುದು ಅರ್ಧರಾತ್ರಿಯಲ್ಲಿ. ಸಾವಿರಾರು ವರ್ಷಗಳ ಹಿಂದೆ ಜಗತ್ತಿನ ಉದ್ಧಾರಕ್ಕಾಗಿ ಮಧ್ಯರಾತ್ರಿಯಲ್ಲಿ, ಸೆರೆಮನೆಯಲ್ಲಿ ಹುಟ್ಟಿದ ಇವನ ಜಯಂತಿಯನ್ನು ಇಂದೂ, ಅರ್ಧರಾತ್ರಿಯಲ್ಲಿಯೇ ಪೂಜಿಸುವ ವಾಡಿಕೆ ಇದೆ. ತಮ್ಮ ಮನೆಯ ಕಿಟ್ಟುವನ್ನು ಪು.ತಿ.ನ ಪ್ರಶ್ನಿಸುತ್ತಾರಂತೆ, ಕೃಷ್ಣ ಎಲ್ಲಿ ಹುಟ್ಟಿದ ಮಗು ಎಂದು ಆ ಮಗು ಅಲ್ಲಿ ಎಂದು 'ಫಲವಸ್ತ್ರ'* ವನ್ನು ಕಟ್ಟಿದ ತೊಟ್ಟಿಲಕಡೆ ಕೈ ಮಾಡುತ್ತದೆ ಇವನ್ನು ಈ ರೀತಿ ಬಣ್ಣಿಸುತ್ತಾರೆ.

ಫಲವಸ್ತ್ರದ ನೆಳಲುಗಳೊಡನೆ ಹಾಸುಹೊಕ್ಕಾಗಿ ಬಂದಿದ್ದ ಹಣತೆಯ ಮಾಸುಬೆಳಕು, ತೊಟ್ಟಿಲನ್ನು ಆವರಿಸಿದ್ದ ಮಸುಕು ಮಸುಕಾದ ಕತ್ತಲು, ಅದರ ಹೊರಗಡೆಯಲ್ಲೂ ತಳಭಾಗದಲ್ಲೂ ಹರಡಿದ್ದ ಪ್ರಭೆ. ಮಗುವಿನ ಅಂಬೆಗಾಲು ಕೃಷ್ಣ, ಅದರ ಭಾವಗರ್ಭಿತವಾದ ಮಾತು ಇವೆಲ್ಲಾ ಒಟ್ಟಿಗೆ ಕಲಿತು ನನಗೊಂದು ನವೀನ ಭಾವವನ್ನು ತಂದವು. ಆ ಸನ್ನಿವೇಶಕ್ಕೆ ಒಂದು ಬೆಳಕನ್ನು ಮೂಡಿಸಿದವು. ಒಂದು ಸೂತಿಕಾ ಗೃಹವನ್ನೂ, ಅದರಲ್ಲಿ ದಿವ್ಯಶಿಶುವೊಂದರ ಪ್ರಾದುರ್ಭಾವವನ್ನೂ ಕಂಡೆ. "ಹೌದು, ಕೃಷ್ಣ ಹುಟ್ಟಿದ್ದಾನೆ, ನಿಜ. ಅದೋ ಅಲ್ಲಿ; ಇಲ್ಲೂ.[1] ಎಂದು ಎದೆ ಮುಟ್ಟಿಕೊಂಡೆ. ಅಂದು ಮೂಡಿದ ನಂಬಿಕೆ ಇನ್ನೂ ಅಳಿದಿಲ್ಲ ಎನ್ನುತ್ತಾರೆ. ಯಾವುದನ್ನು ಮಾಡಬೇಕಾದರೂ ಮನುಷ್ಯನಿಗೆ ಮೂಲಭೂತವಾಗಿ ಬೇಕಾದುದು ನಂಬಿಕೆ. ನಂಬಿಕೆ, ಶ್ರದ್ಧೆಯಿಲ್ಲದೆ ಮಾಡುವ ಕೆಲಸ ಅಪ್ರಯೋಜಕವಾದುದು. ನಂಬಿಕೆಯಿಂದ, ಶ್ರದ್ಧೆಯಿಂದ ಮಾಡುವಂತಹ ಕೆಲಸ ಅದೇ ಆತ್ಮಸಂತೋಷ. ಈ ಭಾವವೇ ಇವರ ಪ್ರಬಂಧದಲ್ಲಿ ನಮಗೆ ನೀಡುವಂತಹ ಸಂದೇಶ ಎನ್ನಬಹುದು. ಈ ಪ್ರಬಂಧದಲ್ಲಿ ಸುಮಾರು ಐದಾರು ವರ್ಷಗಳ ಗೊಕುಲಾಷ್ಟಮಿ ಸನ್ನಿವೇಶಗಳನ್ನು ಚಿತ್ರಿಸುತ್ತಾ ಹೋಗುತ್ತಾರೆ. ಪ್ರತಿಯೊಂದು ಸನ್ನಿವೇಶವೂ ತಮ್ಮ ಮೇಲೆ ಮಾಡಿದ ಪರಿಣಾಮದ ಬಗ್ಗೆ ಚಿಂತನೆಯನ್ನು ನಡೆಸುತ್ತಾರೆ.

ತಾವು ಸಂಸಾರಿಯಾಗಿ ಬೆಂಗಳೂರಿನಲ್ಲಿ ಮನೆ ಮಾಡಿದ ನಂತರ ತಮ್ಮ ಮನೆಯಲ್ಲಿ ತಾವು ನಡೆಸಿದ ಹಬ್ಬದ ಚಿತ್ರಣವನ್ನು ನೀಡುತ್ತಾರೆ. ತಮಗೆ ತಿಳಿದ ಹಾಗೆ ಚಪ್ಪರಕಟ್ಟಿ ಅದರಲ್ಲಿಕೃಷ್ಣನನ್ನು ಇರಿಸಿ ಗೀತೆ ಪಾರಾಯಣವನ್ನು ನಡೆಸಿದರಂತೆ. ಗೀತಾಪಾರಾಯಣದ ಹನ್ನೊಂದನೆಯ ದೃಶ್ಯವನ್ನು ಓದುತ್ತಿದ್ದರಂತೆ ಆಗ ನಮ್ಮ ನೆರೆಮನೆಯ ಕೂಸೊಂದನ್ನು ನನ್ನಾಕೆ ಫಲವಸ್ತ್ರದ ಮುಂದೆ ಮಲಗಿಸಿದ್ದಳು. ಹನ್ನೊಂದನೆಯ ಅಧ್ಯಾಯನವನ್ನು ಓದುತ್ತಾ ಓದುತ್ತಾ ವಿಶ್ವರೂಪ ದರ್ಶನದ ವರ್ಣರೂಪವನ್ನು ಆತ್ಮೀಕರಿಸಿ ಆ – ವಿರಾಟ್-ಮೂರ್ತಿಗೆ ಭಯಗೊಂಡು ಪುಸ್ತಕದಿಂದ ಕಣ್ಣನ್ನು ಮೇಲಕ್ಕೆತ್ತಿದೆ. ಆ ಮಗು ಕಣ್ಣಿಗೆ ಬಿತ್ತು, ಕಾಲುಗಳನ್ನು ಗಾಳಿಯಲ್ಲಿ ಹೊಡೆದು, ಕೈಗಳನ್ನು ನೆಲಕ್ಕೆ ಬಡಿದು, ತಲೆಯನ್ನು ಮೇಲಕ್ಕೆತ್ತಿ, ಹೊಟ್ಟೆಯ ಮೇಲೆ ತೆವಳುವುದಕ್ಕೆ ಯತ್ನ ಮಾಡುತ್ತಾ, ಕೇಕೆ ಹಾಕಿ ನಗುತ್ತಿತ್ತು, ಆ ವಿಶ್ವಮೂರ್ತಿಯೇ ತನ್ನ ವಿರಾಟ್ ಸ್ವರೂಪವನ್ನು ಕನಿಕರದಿಂದ ಸಂಕುಚಿತಗೊಂಡು ಈ ಮಗುವಾಗಿದ್ದಾನೆಂದು ನನಗೆ ತೋರಿತು. ಮಗುವನ್ನು ನೋಡಿದ ಹರ್ಷವೇ, ಮೌಗ್ಧವೇ –

---

* ಹೂವು, ಹಣ್ಣುಗಳಿಂದ ಕೂಡಿದ ಚಪ್ಪರ

[1] ಗೋಕುಲಾಷ್ಟಮಿ: ಪು: 3 ಗ್ರ.ಸಂ.ಗ.ಸಂ

ಅಲ್ಲ ಪುಣ್ಯವೇ ರೂಪು ತಳೆದು- ದೇಹವೆತ್ತಿ - ಚೈತನ್ಯಗೊಂಡು ಈಗ ಶಿಶುವಾಗಿ ಬಂದಿದೆ ಎಂದುಕೊಂಡೆ. ಅಪೂರ್ವವಾದುದೊಂದು ಸುಖದ ಅನುಭವವಾಯಿತು. ಗೀತೆಯನ್ನು ಕೆಳಗಿಟ್ಟು ಮಗುವನ್ನೆತ್ತಿಕೊಂಡು ಮುತ್ತಿಡುವುದಕ್ಕೆ ಹೊರಟೆ, ಮುಟ್ಟಲೂ ಮುತ್ತಿಡಲೂ ಭಯವಾಯಿತು. ಅದರ ನಿಸರ್ಗ ನೈರ್ಮಲ್ಯಕ್ಕೂ ಅಪಾರ್ಥಿವ ಭಾವಕ್ಕೂ ನನ್ನ ಸ್ಪರ್ಶ ಕುಂದುತರುವುದೆಂಬ ಭಯ. ಕಣ್ಣಿಣಿಯೇ ನೋಡಿ "ಶ್ರೀ ಕೃಷ್ಣನ ಜನನವಾಯಿತು[1] ಎಂದುಕೊಂಡೆ. ಈ ಮಾತುಗಳನ್ನು ಗಮನಿಸಿಸುವಾಗ ಆತ್ಮ ಸಂತೋಷದ ಕಾರಣೀಭೂತವಾದ ಅಂಶಗಳನ್ನು ಚಿತ್ರಿಸುತ್ತಾರೆ. ಕೃಷ್ಣನ ಜನನ ಪ್ರಪಂಚದ ಆತ್ಮೋಧ್ಧಾರದ ಭಾವಕ್ಕೆ ಕಾರಣ ಎನ್ನುವಂತಹ ಚಿತ್ರಣ ಇಲ್ಲಿದೆ. ಹಾಗೆಯೇ ನಮ್ಮ ಪುರಾಣಗಳು ಚಿತ್ರಿಸುವ ವಿಷ್ಣುವಿನ ದಶಾವತಾರದಲ್ಲಿ ಕೃಷ್ಣನ ಜೀವನವೇ ಸಾರ್ಥಕತೆಯನ್ನು ಹೊಂದುವುದು. ಕಾರಣ ಅವನ ಯೌವನಕ್ಕಿಂತಲೂ ಅವನ ಶೈಶವ ಸ್ಥಿತಿಯೇ ಎಲ್ಲರಿಗೂ ಬೆಳಕನ್ನು ನೀಡುವುದು. ಆ ಬೆಳಕೇ ಎಲ್ಲರ ಹೃದಯಮಂದಿರದಲ್ಲಿ ನೆಲೆಸಿರುವುದು. ಆದ್ದರಿಂದ ಶಿಶುಗಳೇ ನಾಸ್ತಿಕರಿಗೂ ಆಸ್ತಿಕರಿಗೂ – ಶ್ರಿ ಕೃಷ್ಣ ಜನನವಾರ್ತೆಯನ್ನು ತರುವ ಹರಿಕಾರರು ಎನ್ನುತ್ತಾರೆ. ಈ ಭಾವವನ್ನು ಕವಿ ಎಷ್ಟು ರಮಣೀಯವಾಗಿ ಬಣ್ಣಿಸುತ್ತಾರೆ.

ಕುಳಿರ್ವ ವನದಿ ಸೇರುವ
ಜೊನ್ನಕೂಟ, ಕುಣಿತವ
ಕೊಳಲು ಕರೆವ ಮೋಹದಿಂಪಿಗೊಲಿದು ತುಡಿದು ಹೃದಯವ
ನೆನೆಯಲಷ್ಟು ಮೋದವು!

ಅಹಾ! ಏನೋ ಮೋದವು[2] ಶ್ರೀ ಕೃಷ್ಣನ ಜನನ, ಅವನ ಬಾಲ್ಯ, ಅವನ ಕೊಳಲು ನೆನೆಸಿದರೆ ಸಾಕು, ಅದು ಆತ್ಮಕ್ಕೆ ನೀಡುವ ಸುಖ ಮತ್ತ್ಯಾವುದರಲ್ಲಿಯು ಸಿಗದಂತಹ ಅನುಭವವನ್ನು ನೀಡುತ್ತದೆ ಎನ್ನುವುದನ್ನು ಈ ಗೀತೆಯು ಸಾರುತ್ತ ಹೋಗುತ್ತದೆ.

ತಾವು ನಡೆಸಿದ ಗೋಕುಲಾಷ್ಟಮಿಯ ಜೊತೆಗೆ ತಮ್ಮ ತಂದೆಯ ಮನೆಯಲ್ಲಿ ಮಾಡಿದಂತಹ ಹಬ್ಬದ ಆಚರಣೆಯನ್ನು ನೆನಪಿಸಿಕೊಳ್ಳುತ್ತಾರೆ. ತುಂಬು ಕುಟುಂಬದೊಡಗೂಡಿ ಫಲವಸ್ತ್ರವನ್ನು ಕಟ್ಟುವಂತಹ ವಾತಾವರಣ ಎಂತಹ ರಸಮಯವೆನ್ನುತ್ತಾರೆ. ಹಾಗೆ ನೋಡಿದರೆ ಹಬ್ಬದ ಆಚರಣೆಯ ಕಾರಣವೇ ಬಿಡಿಬಿಡಿಯಾದ ಕುಟುಂಬಗಳೂ ಒಂದು ಕಡೆ ಸೇರಿ ಒಂದು ದಿನವಾದರೂ ಸಂತೋಷದಿಂದ ಕಾಲಕಳೆಯುವ ಸನ್ನಿವೇಶವನ್ನು ನಿರ್ಮಾಣ ಮಾಡುವಂತಹುದು. ಇಂದಿನ ಈ ಕಾಲದ ಆಚರಣೆಗಳು ಅರ್ಥವನ್ನು ಕಳೆದುಕೊಂಡು ಬರಿಯ ಆಚರಣೆಯಾಗಿ ಮಾತ್ರ ಉಳಿದುಕೊಂಡು, ಮೌಲ್ಯಗಳನ್ನು ಕಳೆದುಕೊಂಡಿರುವುದನ್ನು ಕಾಣಬಹುದು. ತಮ್ಮ ಕುಟುಂಬದೊಡಗೂಡಿ ಕೃಷ್ಣನಿಗೆ ಫಲವಸ್ತ್ರಗಳನ್ನು ಕಟ್ಟುತ್ತಾ, ಕದ್ದ ಎರಡು ಹಣ್ಣುಗಳಾದರೂ ಕೃಷ್ಣನಿಗೆ ಸಮರ್ಪಿಸುವಂತಹ ರೀತಿ. ಏಕೆಂದರೆ ಕೃಷ್ಣನಿಗೆ ಕಳ್ಳತನ ಮಾಡಿ ತಿಂದ ಬೆಣ್ಣೆಯೇ ಪ್ರಿಯವಂತೆ. ಈ ನಂಬಿಕೆಗೆ ಅನುಗುಣವಾಗಿ ಅವರ ತಮ್ಮಂದಿರು

---

[1] ಅದೇ ಪು: 5

[2] ಮಳೆಯುನಾಡ ತೊಯ್ಯುತಿಹವು ಪು: 38

ಎಲ್ಲೆಲ್ಲೂ ಕದ್ದು ತಂದ ಹಣ್ಣುಗಳನ್ನು ಫಲವಸ್ತ್ರಕ್ಕೆ ಕಟ್ಟುವುದು. ಈ ಆನಂದ ಸಂತೋಷವನ್ನು ಅನುಭವಿಸುತ್ತಾ ಸಂಜೆ ವೇಳೆಗೆ ಕೃಷ್ಣನ ಅಲಂಕಾರ ಮುಗಿದರೆ ರಾತ್ರಿ ಪೂಜಾರಂಭ. ಭಾಗವತದ ಪಠಣ. ಆ ಪಠಣ ತಮ್ಮ ಮೇಲೆ ಬೀರುವ ಚಿತ್ರಣ ಈ ರೀತಿ ಇವೆ.

ನನ್ನ ತಂದೆಯವರ ಧ್ಯಾನಾಸಕ್ತವಾದ ಪುರಾತನ ಆರ್ಯ ಸಂಸ್ಕೃತಿಯ ಅಕಳಂಕಿತ ಪಕ್ವಫಲದಂತಿರುವ ಮುಖಮುದ್ರೆ – ಆ ಸಂಸ್ಕೃತಿಯ ಪಾತ್ರದಲ್ಲಿ ಹರಿದು, ಶ್ರದ್ಧೆಯು ನೆರೆಗೊಂಡು ವೈದಿಕ ಧರ್ಮ- ಕರ್ಮಗಳ ಕೂಲಗಳಿಂದ ನಿಯಮಿತವಾಗಿ ಜ್ಞಾನಾರ್ಜನೆಯ ವೇಗದಿಂದ ನಿಷ್ಕಲ್ಮಶವಾಗಿ ಹಾದಿ ಸಾಗುತ್ತಾ ಸಾಗುತ್ತಾ ಕ್ರಮೇಣ ತಿಳಿದು, ಅನಂತದಲ್ಲಿ ಆತ್ಮ ನಿವೇದನೆ ಮಾಡಲು ಅಣಿಯಾದ ಜೀವ ನದಿಯ ಚಿತ್ರವದು. ಆ ಮಹಾನದಿಗೆ ಉಪನದಿ ತಾಯಿ, ಆ ವಾತಾವರಣದಲ್ಲೇ ಬೆಳಗಿದ ತಂಗಿ – ಆ ಮಗು – ಬೆತ್ತಲೆಯಾಗಿರುವ ಕೂಸು. ಆ ಹಣತೆ, ಆ ಸನ್ನಿವೇಶ, ಅವೈದಿಕ ವಾತಾವರಣ.[1] ಇಂತಹ ವಾತಾವರಣದಲ್ಲಿ ನಡೆಸುವ ಪೂಜೆ ಕ್ರಿಯೆಗಳು ಹೇಗೆ ಒಂದು ಆಧ್ಯಾತ್ಮಿಕ ಭಾವಕ್ಕೆ ಪ್ರೇರಕವಾಗುತ್ತವೆ ಎಂಬುದನ್ನು ಚಿತ್ರಿಸುತ್ತಾ ಹೋಗುತ್ತಾರೆ.

ಈ ಆಧ್ಯಾತ್ಮಿಕದ ಅರಿವಿನ ಜೊತೆಗೆ ಲೌಕಿಕ ಭಾವವನ್ನು ಮರೆಯದ ಮಾನಸಿಕ ವೈಶಾಲ್ಯವನ್ನು ಈ ಭಾಗದಲ್ಲಿ ಅದ್ಭುತವಾಗಿ ಚಿತ್ರಿಸುತ್ತಾ ಹೋಗುತ್ತಾರೆ. ಪುರಾಣ ಓದುತ್ತಿರುವ ಅವರ ತಂದೆ ಅಲ್ಲಿನ ಭಾವಗಳಿಗೆ ತಮ್ಮ ಲೌಕಿಕ ಜೀವನದ ನಂಟನ್ನು ಕಟ್ಟಿಕೊಡುವುದು. ಕೃಷ್ಣನ ಜನನಕಾಲದ ಸಂದರ್ಭದ ಪಠಣ ವಾಸುದೇವ ದೇವಕಿಯರ ಹೃದಯ ವಿದ್ರಾವಕ ಸನ್ನಿವೇಶ. ಪಠಣ ಮಾಡುತ್ತಿರುವಾಗ ಓದುವುದನ್ನು ನಿಲ್ಲಿಸಿ "ಹಸುವಿಗೆ ಹುಲ್ಲು ಹಾಕಿದಿರಾ"? ಪಾಪ ಮಕ್ಕಳು ಹಸಿದಿರಬೇಕು, ಈ ಬೆಕ್ಕಿಗೆ ಬೆಳಗಿನಿಂದ ಅನ್ನವಿಲ್ಲಾ, ಹಾಲನ್ನಾದರೂ ಹಾಕಬೇಕಿತ್ತು, ಸೀತುವಿಗೂ ಸುಖವಿಲ್ಲ. ಈ ವರ್ಷ ಮಗು ಬಂದಿದೆ ಹೋದವರ್ಷ ಎಲ್ಲೋ ಅಲೆಯುತ್ತಿದ್ದ" ಹೀಗೆ ಅಂತಃಕರಣದ ಮಾತುಗಳು ಇದಕ್ಕೆ ಉತ್ತರ ನೀಡುವವರೂ ಯಾರು ಇಲ್ಲ. ಆದರೆ ಪುರಾಣ ಕಥಾಂಶದ ಜೊತೆಗೆ ಬರುವಂತಹ ಇಂತಹ ಮಾತುಗಳು ಮನುಷ್ಯನ ಮನಸ್ಸನ್ನು ಎಂತಹ ಭಾವೋದ್ರೇಕಗಳಿಗೆ ಪ್ರೇರೇಪಿಸಬಹುದು. ಅವನಲ್ಲಿ ಎಂತಹ ಆರ್ದ್ರತೆಯನ್ನು ತುಂಬಬಹುದು ಎಂಬುದನ್ನು ನೋಡಬಹುದು.

ಒಂದು ಸಂಸ್ಕಾರವಂತ ಹೃದಯ ಯೋಚಿಸುವ ಮಾರ್ಗ ಇದೆ. ಇಂತಹ ಮನೋಧರ್ಮವೇ ನಮ್ಮ ವ್ಯಕ್ತಿತ್ವದ ಸಾರ್ಥಕತೆ. ಹೀಗೆ ಅಂತಃಕರಣ ಪೂರ್ವಕವಾಗಿ ಭಾಗವತ ಪಠಣದ ಸಂದರ್ಭದಲ್ಲಿ ಜನನ ಘಟ್ಟ ಹತ್ತಿರ ಬರುವಾಗ ಫಲವಸ್ತ್ರದ ಮುಂದೆ ಮಲಗಿರುವ ಮಗು ಕೇಕೆ ಹಾಕಿ ನಗುತ್ತದಂತೆ. ತಕ್ಷಣ ತಂದೆಯವರು ಕೂಸಿನ ಕಡೆ ದೃಷ್ಟಿ ಹರಿಸಿ, ಸುಖವೊಂದನ್ನು ಸವಿದು ಹೀಗೆನ್ನುತ್ತಾರೆ ಈ ಕೂಸೇನು ಸಾಮಾನ್ಯಮನುಷ್ಯರದು ಅಸಾಧಾರಣ ರೂಪವಿಲ್ಲ. ಗುಣಗಳಿಲ್ಲ ಆದರೂ ಅದರ ಆಟಗಳಿಗೆ ಮನಸೆಷ್ಟು ಮೋಹಗೊಳ್ಳುತ್ತದೆ. ಇನ್ನು ಆ ದೇವ ಶಿಶು ಎಷ್ಟು ಚೆನ್ನಾಗಿದ್ದಿರಬಹುದು. ಅದರ ಆಟಗಳೆಷ್ಟು ಮುದ್ದಾಗಿರಬಹುದು.

---

[1] ಅದೇ ಪು: 6

ನಂದಗೋಪ ಯಶೋದೆಯರೂ ನಂದ ಗೋಕುಲದ ಪ್ರಜೆಗಳೂ ಈ ಮುದ್ದಿನ ಸೋಗಿಗೆ ಹುಚ್ಚಾದುದರಲ್ಲಿ ಆಶ್ಚರ್ಯವೇನು[1] ಎನ್ನುತ್ತಾರೆ.

ಈ ಮಾತುಗಳು ಗೋಪಾಲ ಬಾಲಕೃಷ್ಣನ ಜನ್ಮದ ಚಿತ್ರಣವನ್ನು ನೀಡುತ್ತದೆ. ಶ್ರೀ ಕೃಷ್ಣನು ಹುಟ್ಟಿದೆ ಸೆರೆಮನೆಯಲ್ಲಿ, ಕಂಸನ ಕ್ರೌರ್ಯವನ್ನು ಮುಂದಿಟ್ಟುಕೊಂಡು ಸಾವನ್ನು ಕಾಣಬಹುದಾದ ಶಿಶುವನ್ನು ರಕ್ಷಿಸುವ ಚಿತ್ರಣ, ಭಯದ ವಾತಾವರಣ, ಸುರಿಯುವ ಮಳೆ. ಇವನ್ನೆಲಾ ಮೀರಿ ಬದುಕನ್ನು ಕಾಣುವ ಹಸುಳೆಯ ಜೀವನದ ಪ್ರಶ್ನೆ. ಇಂತಹ ವಾತಾವರಣದಲ್ಲಿ ಗೆಲುವನ್ನು ಸಾಧಿಸುವ ಆ ಬಾಲಕ ಅವನ ಜೀವನ ಇದು ಎಲ್ಲರಿಗೂ ಕೌತುಕವೇ – ರಸದೌತಣವೇ. ಪು.ತಿ.ನ ಹೀಗೆ ಚಿತ್ರಿಸುತ್ತಾರೆ.

ಸಾಸಿರಹೆಡೆ ಸರ್ಪವು
ಸೋನೆಗಾಗೆ ಛತ್ರವು,
ಮಾಯೆನಿದ್ರೆಗಂದು ಜಗವೆ ಕೆಡೆಯಲಡಗೆ ಶಬ್ದವು,
ಯಮುನೆ ಬತ್ತಿ ಬಟ್ಟೆಗೊಡೆ
ಶಿಶುವ ಬಿಟ್ಟ ಗೊಲ್ಲನೆಡೆ
ಮಾಯೆ ಹರಿಯೆ, ಬಾಲನಳೆ
ಗೋಪಿ ಹರುಷ ಕೋಡಿಗೊಳೆ
ನಂದಗೋಪ ನೋಡಿ ನೋಡಿ ಸುತನು ಮುದ್ದು ಸೂರೆಗೊಳೆ
ಅಂದು ಎಲ್ಲ ಗೋಕುಲ
ಹರುಷಾಕಾಯ್ತು ದೇಗುಲ[2]

ಇಂತಹ ದೇವನಿಷ್ಠ ಪು.ತಿ.ನ ರಿಗೆ, ಅವರ ಆಧಾತ್ಮದ ದರ್ಶನ ಶ್ರೀಕೃಷ್ಣ ಅದಕ್ಕಾಗಿಯೇ ಈ ಪ್ರಬಂಧದ ಕೊನೆಯಲ್ಲಿ ಹೀಗೆನ್ನುತ್ತಾರೆ.

ಪ್ರತಿ ವರ್ಷದಲ್ಲೂ, ಪ್ರತಿ ಗೃಹದಲ್ಲೂ, ಪ್ರತಿ ಕುಟುಂಬದಲ್ಲೂ ಕೃಷ್ಣ ಶಿಶು ಹುಟ್ಟುತ್ತಲೇ ಇರುತ್ತಾನೆ. ಭಾರತ ಧರ್ಮ ಭಾರತ ವರ್ಷದಲ್ಲಿ ಉಳಿದಿರುವವರೆಗೂ. ಆತನೊಂದಿಗೆ ದೊಡ್ಡ ನಚ್ಚೊಂದು ಹುಟ್ಟುತ್ತದೆ- ನೂತನ ಶ್ರದ್ಧೆಯೊಂದು, ಉತ್ಸಾಹವೊಂದು, ಸಂತೋಷವೊಂದು, ನೆಮ್ಮದಿಯೊಂದು ನೂತನ ಧ್ಯೇಯವೊಂದು. ಈ ನಚ್ಚು ಶ್ರದ್ಧಾವಂತನ ಬೆನ್ನು ಹಿಡಿದು ಕೊನೆಯವರೆಗೂ ಬರುತ್ತದೆ. ಸಂಸಾರೋತ್ತರಣ ಕಾರ್ಯದಲ್ಲಿ ನೆರವಾಗುತ್ತದೆ. ಸೆರೆಮನೆಗೆ ಬೆಳಕಾಗುತ್ತದೆ. ಬೆಳಕಿರುವ ಮನೆಗೆ ನೂತನ ಪ್ರಭೆ ಕೊಡುತ್ತದೆ. ಈ ನಚ್ಚು, ನಮ್ಮ ಪಿತ್ರಾರ್ಜಿತವಾದ, ಯಾರಿಂದಲೂ ಕದಿಯಲಾರದ, ಎಂದೂ ನಶಿಸದ, ಸಂಸಾರಕ್ಕೆ ಸಾರಭೂತವಾದ ಆಸ್ತಿ. ಈ ಶ್ರೀ ಕೃಷ್ಣ ಜನನದ ನಚ್ಚು[3]

---

[1] ಅದೇ, ಪು: 7
[2] ಮಳೆಯುನಾಡ ತೊಯ್ಯುತಿರೆ ಪು. 37
[3] ಅದೇ ಪು: 8

ಇಲ್ಲಿ ಶ್ರೀ ಕೃಷ್ಣನ ಜನ್ಮ ನಂಬಿಕೆ, ಅವನಿಂದ ಉಂಟಾದ ಉಪದೇಶ ಇದ್ಯಾವುದೂ ಬೂಟಾಟಿಕೆಯಲ್ಲ. ಇವೆಲ್ಲಕ್ಕೂ ಸತ್ವವಿದೆ. ಜೀವಂತಿಕೆಯಿದೆ. ಸಾವಿರಾರು ವರ್ಷಗಳ ಹಿಂದೆ ಈ ಕೃಷ್ಣ ಇಂದೂ ಭಾರತೀಯರ ಪರಮ ದೈವವಾಗಿರುವುದು ಅವನ ಚಿಂತನಶೀಲ ಉಪದೇಶಗಳಿಂದ. ಆ ಉಪದೇಶಗಳಲ್ಲದೇ ಅವನ ಬಾಲ್ಯ ಜೀವನದ ತುಂಟಾಟಗಳು. ಆ ತುಂಟಾಟಗಳ ಜೊತೆ ಇರುವ ಒಂದು ಆದರ್ಶ. ಈ ಆದರ್ಶ ಗುಣದ ಜೊತೆಗೂಡಿದ ಮುಗ್ಧತೆ. ಇಂತಹ ಮುಗ್ಧಮನೋಭಾವಗಳೇ ಶ್ರೀ ಕೃಷ್ಣನ ಮತ್ತು ಅವನನ್ನು ನಂಬಿದವರ ಆಸ್ತಿ.

ಅದಕ್ಕಾಗಿಯೇ ಪು.ತಿ.ನ ವರಲ್ಲಿ ಕೃಷ್ಣ ಹೃದಯ ಸಂವಾದಿಯೂ ಆಗುತ್ತಾನೆ. ಪ್ರಪಂಚದ ಸಂವಾದಿಯೂ ಆಗುತ್ತಾನೆ. ಅವನನ್ನು ನಂಬಿದ ಭಕ್ತರಿಗೆ ಆತ ಬೆಳಕಾಗುತ್ತಾನೆ. ಈ ಬೆಳಕು ಯಾರಿಗೂ ಕದಿಯಲು ಸಾಧ್ಯವಿಲ್ಲ ಎನ್ನುವ ಮಾತು. ನಮ್ಮಲ್ಲಿರುವಂತಹ ವ್ಯಕ್ತಿತ್ವ, ಆದರ್ಶ ಗುಣಗಳನ್ನೂ ಯಾರು ಕದಿಯಲು ಸಾಧ್ಯ. ಈ ಆದರ್ಶದ ರೀತಿ ನೀತಿಗಳೂ, ನಾವು ಪರಂಪರೆಯಿಂದ ಪಡೆದುಕೊಂಡು ಬಂದ ಸ್ವಾಭಾವಿಕ ನೆಲೆಗಟ್ಟುಗಳು ಯಾರಿಂದ ಕದಲಿಸುವುದಕ್ಕು ಸಾಧ್ಯವಿಲ್ಲ. ಇಂತಹ ಒಂದು ಭವ್ಯವಾದ ವೈದಿಕ ಪರಂಪರೆಯೇ ಪು.ತಿ.ನರವರಿಗೆ ಇರುವುದರಿಂದಲೇ ಇಂತಹ ಗಟ್ಟಿಯಾದ ಮಾತುಗಳನ್ನು ಹೇಳುತ್ತಾರೆ ಎನ್ನಬಹುದು.

ಪು.ತಿ.ನ ರವರ ಮತ್ತೊಂದು ಶ್ರದ್ಧಾರೂಪ ಪರಂಪರೆಯ ಚಿತ್ರಣ 'ರಥಸಪ್ತಮಿ'. ಯದುಗಿರಿಯಲ್ಲಿ ನಡೆಯುವ ಈ ರಥಸಪ್ತಮಿಯ ಹಬ್ಬದ ವಾತಾವರಣವನ್ನು ಈ ಚಿತ್ರ ನೀಡುತ್ತದೆ. ತಾವು ಮಗುವಾಗಿದ್ದಾಗ ನಡೆದ ಸಪ್ತಮಿಗೂ, ತಾವು ಯೌವನಾವಸ್ಥೆಗೆ ಬಂದಾಗ ನಡೆದ ಸಪ್ತಮಿಯ ಆಚರಣೆಗೂ ಇರುವಂತಹ ಭಿನ್ನತೆಗಳನ್ನೂ ಕಟ್ಟಿಕೊಡುತ್ತಾರೆ. ಈ ಸಂಕಥನಕ್ಕೆ ಇವರು ಉಪಯೋಗಿಸುವ ತಂತ್ರ ಶೈಶವಾ ರೀತಿ. ಒಂದು ಮಗು ತಾನು ರಥಸಪ್ತಮಿಯಂದು ಯದುಗಿರಿಯಲ್ಲಿ ಅನುಭವಿಸಿದ ಆನಂದ ತಾದ್ಯಾತ್ಮಿಕೆ.

ಹಬ್ಬದ ಆಚರಣೆಯ ಮಹತ್ವವೇ ಆತ್ಮ ಸಂತೋಷ ಎಂದು ಸ್ಪಷ್ಟವಾಗಿದೆ. ಇಂತಹ ಹಬ್ಬಗಳ ಆಚರಣೆಯು ತನ್ನ ನಿಜವಾದ ಮೌಲ್ಯವನ್ನು ಕಳೆದುಕೊಂಡು ಬರಿಯ ಆಚರಣೆಯಾಗಿರುವಂತಹ ದುಃಖ ಈ ಕಥಾನಕದಲ್ಲಿ ಪು.ತಿ.ನ ರವರಿಗಿದೆ. ಇದರ ಬಗ್ಗೆ ಹೀಗೆನ್ನುತ್ತಾರೆ

ದೇವಸ್ಥಾನದಿಂದ ಈಗತಾನೆ ಉತ್ಸವ ಮುಗಿಸಿಕೊಂಡು ಬಂದು ಕುಳಿತಿದ್ದೇನೆ. ಮನಸೇಕೋ ಕುಗ್ಗಿ ಹೋಗಿದೆ. ಇಂದು ಈ ಹಬ್ಬಕ್ಕೆ ಹಿಂದಿನ ಪ್ರಭೆಯಿಲ್ಲ. ಜನಗಳಲ್ಲಿ ಅಂದಿನ ಶ್ರದ್ಧೆಯಿಲ್ಲ. ಹಬ್ಬದ ಆತ್ಮವು ಅಳಿದುಹೋಗಿ ಅದರ ನೆರಳಿನ್ನೂ ಈ ದಿನಕ್ಕೆ ಅಂಟಿಕೊಂಡಿರುವಂತೆ ತೋರುತ್ತದೆ. ಹಬ್ಬವು ಆತ್ಮವಂತಾವಾಗಿದ್ದ ದಿನಗಳಲ್ಲಿ ತಿರುಗಿ ಜೀವಿಸಬೇಕೆಂಬ ಹಂಬಲ ನನಗೆ ಹುಟ್ಟುತ್ತದೆ.[1] ಇದನ್ನು ಗಮನಿಸಿದಾಗ ಪು.ತಿ.ನರ ಶ್ರದ್ಧಾವಂತ ಸಂಪ್ರದಾಯದ ಅರಿವು ನಮಗುಂಟಾಗುತ್ತದೆ. ಇಂತಹ ಜೀವಂತ ಆಚರಣೆಗಾಗಿ ಇಪ್ಪತ್ತು ವರ್ಷದ ಗತಕಾಲಕ್ಕೆ

[1] ರಥಸಪ್ತಮಿ, ಪು: 17

ಹಿಂತಿರುಗುತ್ತಾರೆ. ಹೀಗೆ ಹಿಂತಿರುಗಿದಾಗ ಅಲ್ಲಿ ಅವರು ಅನುಭವಿಸುವುದು ಬಾಲ್ಯ ಜೀವನವನ್ನು ಒಂದು ವಾಸ್ತವದ ಸ್ಥಿತಿಯನ್ನು ನಿರಾಕರಿಸಿ, ಮತ್ತೊಂದು ಅಥವಾ ಯಾವುದೂ ವಾಸ್ತವ ಕಥಾನಕಕ್ಕೆ ಇಳಿಯುವಂತ ಈ ಸ್ಥಿತಿಯನ್ನು ಶಿಶುಪ್ರಾಯತೆ ಎಂದು ಆಧುನಿಕರು ಬಣ್ಣಿಸುತ್ತಾರೆ. ಶಿಶುಪ್ರಾಯತೆಯ ಮುಗ್ಧತೆಯನ್ನು ಒಳಗೊಂಡು ನಟಿಸಿದ ಪ್ರಸಿದ್ಧ ಚಿತ್ರನಟ ಚಾರ್ಲಿಚಾಪ್ಲಿನ್ ಇಲ್ಲಿ ನೆನಪಿಗೆ ಬರುತ್ತಾನೆ. ತನ್ನ ಎಲ್ಲಾ ಚಿತ್ರಗಳನ್ನೂ, ಶಿಶುಮುಗ್ಧತೆಯಿಂದ ನೋಡುತ್ತಾ ಪ್ರೇಕ್ಷಕರಿಗೆ ವಿಭಿನ್ನವಾಗಿ ಕಾಣುತ್ತಾನೆ.

ರಥಸಪ್ತಮಿಯನ್ನು ಶಿಶುಪ್ರಾಯತೆಯಿಂದ ಗಮನಿಸುವ ಪು.ತಿ.ನ ಇನ್ನಾವುದೋ ಅಂಶವನ್ನು ತೆರೆದಿಡಲು ಪ್ರಯತ್ನಪಡುತ್ತಾರೆ. ಆ ರಥಸಪ್ತಮಿಯ ಹಿಂದಿನ ದಿನ ರಾತ್ರಿ ಪುರದ ಹೆಂಗಳೆಯರು ಬೀದಿಗಳನ್ನು ಗುಡಿಸಿ, ಹೊಸ ಹೊಸ ರಂಗವಲ್ಲಿಯನ್ನು ಬಿಡುವಂತಹ ಸಂಭ್ರಮ. ಅವರು ಬಿಡುವಂತಹ ಬಗೆ ಬಗೆ ರಂಗೋಲಿಗಳು ನೋಡುಗರ ಕಣ್ಮನ ಸೆಳೆಯುತ್ತಿದೆ. ಇಡೀ ಊರೇ ಇಂತಹ ಸಂಭ್ರಮದಲ್ಲಿರುವಾಗ ಐದಾರು ವರ್ಷದ ಮಗು ತನ್ನ ತಾಯ ಸೆರಗನ್ನು ಹಿಡಿದು ಅವಳ ಹಿಂದೆ ಮುಂದೆ ಓಡಾಡುತ್ತಾ, ಕೂತುಹಲದಿಂದ ಸಂಭ್ರಮಗಳನ್ನು ಗಮನಿಸುತ್ತಿದೆ.

ತಾನು ಕಳೆದ ವರ್ಷ ಕಂಡ ಚಿನ್ನದ ರೇಕುಗಳಿಂದ ಥಳಿಥಳಿಸುತ್ತಿದ್ದ ದೊಡ್ಡಸೂರ್ಯಮಂಡಲ ವಾಹನವೊಂದು ದೇವಸ್ಥಾನದ ಮುಂದೆ ನಿಂತಿದ್ದನ್ನು ಕಂಡು ತನ್ನ ತಾಯಿಗೆ ಅದು ಏನೆಂದು ಪ್ರಶ್ನೆ ಮಾಡುತ್ತದೆ. ತಾಯಿ ಅದಕ್ಕೆ ಹೀಗೆ ಉತ್ತರ ನೀಡುತ್ತಾಳೆ. ನಾಳೆ ಸೂರ್ಯ ತನ್ನ ಹಳೆ ರಥದಿಂದ ಇಳಿದು ಈ ಹೊಸ ರಥದೊಡನೆ ಸಂಚಾರ ಹೊರಡುತ್ತಾನೆ. ತಾನೇರುವುದಕ್ಕೆ ಮುಂಚೆ ದೇವರಿಗೊಪ್ಪಿಸಿ ಪುಣ್ಯ ಪಡೆಯುವುದಕ್ಕೆ ಅದನ್ನು ಇಂದು ಇಲ್ಲಿಗೆ ಕಳಹಿಸಿದ್ದಾನೆ. ನಾಳೆ ಆತನ ಸಾರಥಿಯೂ, ಏಳು ಕುದುರೆಗಳೂ ಬರುತ್ತವೆ. ಸೂರ್ಯನಿಗೂ ನಮ್ಮ ಚೆಲುವರಾಯನನ್ನೊ ಕಂಡರೆ ಎಷ್ಟು ಶ್ರದ್ಧಾಭಕ್ತಿ. ಹೀಗೆ ರಥ ಕಳುಹಿಸುವುದಕ್ಕೆ ಆತ ಒಂದು ವರುಷವೂ ತಪ್ಪುವುದಿಲ್ಲ[1] ಈ ಮಾತುಗಳು ಮಗುವಿನ ಮನಸ್ಸಿನಲ್ಲಿ ನೆಲೆನಿಂತು ಆ ಸೂರ್ಯಮಂಡಲವಾಹನ, ಅದರ ರೆಕ್ಕೆಗಳೂ ಎಲ್ಲವೂ ಗಮನ ಸೆಳೆಯುತ್ತವೆ. ಈ ಸಾರಥಿ ಈತನ ಪರಮಮಿತ್ರನಾಗುತ್ತಾನೆ. ಈ ಸಾರಥಿಯ ಸ್ನೇಹ ಸಂಪಾದಿಸಿ, ಕುದುರೆ ಲಗಾಮನ್ನು ಹಿಡಿದು ಚಾವಟಿಯನ್ನು ಛಟ್ಟೆಂದು ಕೊಡಹಬೇಕೆಂಬ ಆಸೆ ಉಂಟಾಗುತ್ತದೆ. ಆದರೆ ಆತ ಇವನ ಕೈಗೆ ಸಿಗುವುದಿಲ್ಲ. ಆದ್ದರಿಂದ ಈ ಸಲದ ಉತ್ಸವದಲ್ಲಿಯಾದರೂ ಅವನನ್ನು ಹಿಡಿಯಬೇಕೆಂಬ ಉತ್ಕಟಾಕಾಂಕ್ಷೆ ಆ ಮಗುವಿಗಿರುತ್ತದೆ. ಅದಕ್ಕಾಗಿ ಈ ಉತ್ಸವವನ್ನು ಸಂಭ್ರಮದಿಂದ ಎದಿರುನೋಡುತ್ತದೆ.

ಮುಂದೆ ಬಹಳ ಸಂಭ್ರಮದಿಂದ ಬರುತ್ತಿರುವ ಉತ್ಸವವನ್ನು ಗಮನಿಸುತ್ತಾ ಹೋಗುತ್ತದೆ. ಸುತ್ತಲಿನ ವಾತಾವರಣವೂ ಸಂಭ್ರಮವೇ. ಇಂದವರ ಸಂಭ್ರಮವೇನು, ಉತ್ಸಾಹವೇನು, ಸಿಂಗಾರವೇನು ದೇವ ಸಂದರ್ಶನೋತ್ಸುಕತೆಯೇನು, ಶ್ರದ್ಧೆಯೇನು, ಭಕ್ತಿಪಾರವಶ್ಯವೇನು! ಪ್ರತಿಯೊಬ್ಬನಿಗೂ ದೇವಸಾನ್ನಿಧ್ಯ ಸಾಕ್ಷಾತ್ಕಾರವಾಗಿದೆ. ಅಪೂರ್ವ ದಿವ್ಯ ಸಂತೋಷವೊಂದು ಚೇತನಾಚೇತನ ವಸ್ತುಗಳ ಅಸ್ತಿತ್ವವನ್ನು ತುಂಬಿ ವಾತಾವರಣದಲ್ಲಿ

---

[1] ಅದೇ, ಪು: 17

ಹೊರಸೂಸಿದೆ[1] (ಅದೇ ಪು: 19) ಇಂತಹ ಸಂಭ್ರಮದಲ್ಲೆ ಅಪೂರ್ವ ಸನ್ನಿವೇಶ, ಅಪೂರ್ವ ವ್ಯಕ್ತಿ ಈ ಮಗುವಿನ ಕಣ್ತುಂಬುತ್ತದೆ. ಆತನೇ ಕೊಂಬಿನ ಚೆಲುವ. ಬಿಳಿಯದುಪ್ಪಟ, ಮುಖಕ್ಕೆ ನಾಮ, ಕಿವಿಗೆ ದವನ ಸಿಕ್ಕಿಸಿ, ಕೊಂಬಿಗೆ ಹೂವನ್ನು ಸುತ್ತಿ, ಉತ್ಸವ ಬರುವ ಕಡೆ ನೋಡುತ್ತಾ ನಿಂತಿದ್ದವನನ್ನು ನೋಡಿ ಈ ಮಗು ನಗುತ್ತದೆ. ಈ ಮಗುವಿಗೆ ಮೊದಲಿನಿಂದಲೂ ಇವನನ್ನೂ ಕಂಡರೆ ಪ್ರೀತಿ. ಚೆಲುವರಾಯನಿಗೆ ಕೊಟ್ಟಂತಹ ಸ್ಥಾನವನ್ನು ತಾನು ಇವನಿಗೆ ಕೊಟ್ಟಿದೆ. ಏಕೆಂದರೆ ಚೆಲುವರಾಯನಂತೆ ಇವನೂ ಮೌನಿ, ಚೆಲುವರಾಯನಂತೆ ಉತ್ಸವ ಕಾಲದಲ್ಲಿ ಮಾತ್ರ ಕಣ್ಣಿಗೆ ಬೀಳುವನು. ಉಳಿದ ಕಾಲದಲ್ಲಿ ಅವನೆಲ್ಲಿರುತ್ತಾನೆಂಬುದು ಯಾರಿಗೂ ಗೊತ್ತಿಲ್ಲ. ಹಾಗೆಯೇ ಚೆಲುವನಿಗೆ ವ್ಯವಹಾರವಿದ್ದದ್ದು ಚೆಲುವರಾಯನೊಂದಿಗೆ ಮಾತ್ರ ಅವನಿಗೂ ಚೆಲುವನಿಗೂ ಏನೂ ಒಂದು ಸಂಬಂಧ ಎನ್ನುವುದು ಮಗುವಿಗೆ ತಿಳಿದಿತ್ತು. ಏಕೆಂದರೆ ಚೆಲುವ ಕೊಂಬನ್ನು ಹಿಡಿದುಕೊಂಡು ಊದಿದಲ್ಲದೆ ಚೆಲುವರಾಯ ಮುಂದಕ್ಕೆ ಹೊರಡುವುದಿಲ್ಲ. ಅವನು ಕೊಂಬೂದಿದಲ್ಲದೆ ಚೆಲುವರಾಯನಿಗೆ ಉತ್ಸವವಿಲ್ಲ. ಪೂಜೆಯಿಲ್ಲ, ಸಹಾಸ್ರನಾಮಾರ್ಚನೆಯಿಲ್ಲ[2] ಈ ರೀತಿಯ ಅನೇಕ ಅನಿಸಿಕೆಗಳು ಮಗುವಿನಲ್ಲಿ ಮನೆ ಮಾಡಿಕೊಂಡಿದ್ದವು. ಚೆಲುವರಾಯನಿಲ್ಲದೆ ಕೊಂಬಿನ ಚೆಲುವರಾಯನಿಲ್ಲವೆಂಬ ನಂಬಿಕೆ ಆ ಮಗುವಿಗೆ ಬಲವಾಗಿತ್ತು.

ಇಷ್ಟಲ್ಲದೇ ಚೆಲುವ ಕೊಂಬೂದುವ ಕಲೆಗೆ ಅದು ಮನಸೋತಿತ್ತು ಅದನ್ನು ತಾನು ಕಲಿಯಬೇಕೆಂಬ ಹಂಬಲ ಅದಕ್ಕಿತ್ತು. ಅದಕ್ಕೆ ಒಂದು ದಿನ ಅವನ ಹತ್ತಿರ ಓಡಿಹೋಗುವಾಗ ತಾಯಿ ತಡೆದು ನಿಲ್ಲಿಸಿ, ಬೈದು ಮಡಿಬಟ್ಟೆ ಉಡಿಸಿದ್ದಳಂತೆ. ಇದರಿಂದ ಮಗು ಆಶ್ಚರ್ಯಪಡಲಿಲ್ಲ. ಏಕೆಂದರೆ ದೇವಸ್ಥಾನದಲ್ಲಿ ಚೆಲುವರಾಯನ ಹತ್ತಿರ ಹೋದಾಗಲೂ ತಾಯಿ ಹಿಡಿದು ನಿಲ್ಲಿಸಿದ್ದರು. ಈಗಲೂ ಹಾಗೆಯೇ ಎನ್ನುವ ತಿಳುವಳಿಕೆ ಅದರಲ್ಲಿ ಮೂಡಿತ್ತು. ದೇವರಂತೆ ಚೆಲುವನೂ ಎಂಬ ನಂಬಿಕೆ ಇನ್ನೂ ಹೆಚ್ಚಾಗಿ ಮಗುವಿನ ಮನದಲ್ಲಿ ಆಳವಾಗಿ ಬೇರೂರಿತು.

ವಿಶಿಷ್ಟಾದ್ವೈತ ಸಿದ್ಧಾಂತ ಇದನ್ನು ಬಹಳ ಮುಕ್ತವಾಗಿ ಚರ್ಚಿಸುತ್ತದೆ. ಯಾವ ವರ್ಣದವರಾಗಲೀ, ಕುಲದವರಾಗಲೀ, ಅವರು ಭಗವದ್ಭಕ್ತರಾಗಿದ್ದರೆ ಅವರನ್ನು ಬ್ರಾಹ್ಮಣರಂತೆಯೇ ಶ್ಲಾಘಿಸಿ ಆದರಿಸಬೇಕು. ಭಗವದ್ಭಕ್ತಿ ಎಂಬ ಗುಣ ವಿಶೇಷದಿಂದ ಯಾರಾದರೂ ಗೌರವಾರ್ಹರಾಗುತ್ತಾರೆ. ಶಾಸ್ತ್ರೋಕ್ತವಾದ ಆಚಾರ ವ್ಯವಹಾರಗಳು ನಿಯತವಾದರೂ ಗುಣದ ಆಧಾರದಿಂದ ಗೌರವ ತೋರಿ ಶ್ಲಾಘಿಸಬೇಕು[3]

ಈ ದರ್ಶನವನ್ನು ವಿವೇಕಿಗಳು ಅನ್ನಿಸಿಕೊಂಡವರು ಸಾಧಿಸಲಾಗದಿದ್ದರೂ, ಮುಗ್ಧತೆಯ ಜೀವಿಗಳು ಸಾಧಿಸುತ್ತಾರೆ. ಇಂತಹ ಸಾಧಕ ಮನಸ್ಸು ನಮ್ಮ ಪು.ತಿ.ನರದು. ಆದ್ದರಿಂದಲೇ ಚೆಲುವರಾಯನಿಗೆ ಕೊಂಬಿನ ಚೆಲುವನ ಹೋಲಿಕೆಗಳು, ಇಬ್ಬರ ಸಾಮರಸ್ಯ ಒಂದೇ ಎಂಬುದಾಗಿ

---

[1] ಅದೇ, ಪು: 17

[2] ಅದೇ, ಪು: 20

[3] ರಾಮಾನುಜದರ್ಶನ: ಪು: 236

ವರ್ಣಿಸುವ ಸೌಜನ್ಯತೆಯನ್ನು ಪಡೆದಿದೆ ಎನ್ನಬಹುದು. ರಥಸಪ್ತಮಿಯ ಪ್ರಬಂಧ ನಮಗೆ ಮುಖ್ಯವಾಗುವುದು ಈ ನೆಲೆಯಲ್ಲಿಯೇ.

ಮುಂದೆ ರಥೋತ್ಸವವು ಹೊರಟು ಎಲ್ಲರ ಮನೋಮಂದಿರವು ಸಂತೋಷವನ್ನು ಪಡೆಯುವಾಗ ರಥದ ಸಾರಥಿ ತನ್ನನ್ನು ಕರೆಯುವಂತೆ ಭಾಸವಾಗುತ್ತದೆ. ಹತ್ತಿರ ಹೋಗಲಾರದೆ ಒದ್ದಾಡುವಾಗ ತಂದೆಯು ಆ ಮಗುವನ್ನು ಆ ದೇವನ ಸನ್ನಿಧಿಗೆ ಕರೆದುಕೊಂಡು ಹೋಗುತ್ತಾನೆ ಆಗ ಆ ಮಗುವಿಗಾದ ಆನಂದ ಅದೇನು ಸಂತೋಷಾಶ್ಚರ್ಯಗಳಿಂದ ದೇವದೇವವನ್ನು ನೋಡುತ್ತಿದೆ ಅಗೋ ಸಾರಥಿ ಮತ್ತು ಕುದುರೆಗಳು; ನಿಜವಾಗಿ ದೇವಾಶ್ವಗಳವು. ಈ ದಿವ್ಯಶಕ್ತಿ ಸಾನಿಧ್ಯದ ಸಂತೋಷೋತ್ಕರ್ಷದಲ್ಲಿ ಮಗುವಿನ ಕುತೂಹಲವಳಿದು ಹೋಗಿದೆ. ವ್ಯಕ್ತಿತ್ವ ಕೊಚ್ಚಿಹೋಗಿದೆ. ಈ ಸಂತೋಷಕ್ಕೆ ಮೇರೆಯಿಲ್ಲ, ಆ ಭಕ್ತಿಗೆ ಸ್ವಾರ್ಥವಿಲ್ಲ. ಈ ಪ್ರೀತಿಗೆ ರಾಗವಿಲ್ಲ, ಈ ಪೂಜೆಗೆ ಫಲಾಪೇಕ್ಷೆಯಿಲ್ಲ. ಈ ಪಾರವಶ್ಯಕ್ಕೆ ತಪಸ್ಸು ಸಾಟಿಯಿಲ್ಲ. ಆತ್ಮ ಸಮರ್ಪಣಾ ಚರಮಭಾವವದು ಈ ಭಾವ ಮಗುವಿಗೆ ಮಾತ್ರ ಸಾಧ್ಯ[1]. ಇಂತಹ ಮಾತುಗಳು ಪು.ತಿ.ನರ ವೈಯಕ್ತಿಕ ದರ್ಶನಕ್ಕೆ ಮಾದರಿಗಳಾಗುತ್ತವೆ ಎಂದೂ ಯಾರಿಂದಲೂ ಯಾವುದನ್ನು ಅಪೇಕ್ಷಿಸದ ಮುಗ್ಧಜೀವಿ ಎಂದು ಕನ್ನಡ ಸಾರಸ್ವತ ಲೋಕ ಅವರನ್ನು ಬಣ್ಣಿಸುತ್ತದೆ. ಇಂತಹ ವ್ಯಕ್ತಿತ್ವ ವ್ಯವಹಾರಿಕ ಪ್ರಪಂಚದಲ್ಲಿ ಬದುಕುವ ಸಾಮಾನ್ಯ ಮನುಷ್ಯರಿಗೆ ಮೂಡುವುದು ಸಾಧ್ಯವಿಲ್ಲ. ಏಕೆಂದರೆ ಇಂದು ನಾವು ಅಪೇಕ್ಷಿಸುವುದೇ ಪ್ರತಿಯೊಂದು ಕಾರ್ಯಕ್ಕೂ ಫಲಾಪೇಕ್ಷೆ, ಇದಲ್ಲದೆ ಜೀವನ ನಡೆಯದು. ಸ್ವಾರ್ಥಪರವಲ್ಲದ ಜೀವನ ಎಲ್ಲೂ ಕೆಲವು ಮಹಾನ್ ವ್ಯಕ್ತಿಗಳಿಗೆ ಮಾತ್ರ ಮೀಸಲಾಗಿರಬಹುದು.

ನಮ್ಮ ದೈವ ಭಕ್ತಿಯು ಸ್ವಾರ್ಥಪರತೆಯಿಂದ ಕೂಡಿದುದೇ. ಮಕ್ಕಳ ಮನಸ್ಸಿನಲ್ಲಿ ಮಾತ್ರ ಇಂತಹ ಸ್ವಾರ್ಥವಿಲ್ಲದ ಪ್ರೀತಿ, ಭಕ್ತಿ, ಗೌರವ ಉಂಟಾಗಲೂ ಸಾಧ್ಯವೇನೋ. ಆದ್ದರಿಂದಲೇ ಇಂತಹ ಪರಮ ಆತ್ಮಾನಂದವನ್ನು ಶಿಶುಪ್ರಾಯತೆಯ ಮುಖಾಂತರ ಅನುಭವಿಸುವ ತಂತ್ರವನ್ನು ಈ ಪ್ರಬಂಧದಲ್ಲಿ ಮೂಡಿಸಿದ್ದಾರೆ ಎನ್ನಬಹುದು.

ಹೀಗೆ ಮಗುವಿನ ಅಂತರ್ಭಾವದಿಂದ ಮತ್ತೆ ವಾಸ್ತವತೆಗೆ ಹಿಂತಿರುಗಿದರೆ ಹಬ್ಬ ತನ್ನ ಅಂತಸ್ಸತ್ವವನ್ನು ಕಳೆದುಕೊಂಡು ನಿರ್ಜೀವವಾಗಿದೆ. ಇದನ್ನು ಪು.ತಿ.ನ ಅಂತರ್ಜ್ವರವೆಂದು ಬಣ್ಣಿಸುತ್ತಾರೆ. ಇಂದೂ ಈ ಹಬ್ಬ ಮೌಲ್ಯವನ್ನು ಕಳೆದುಕೊಂಡು ಆಚರಣೆ ಮಾತ್ರವಾಗಿದೆ. ಇಂದಿನ ರಥಸಪ್ತಮಿ ಅಂದಿನ ಉತ್ಸವದ ನೆರಳಂತೆ ಕಾಣುತ್ತದೆ. ಹೀಗೆಕಾಯಿತು ಎಂದು ಯೋಚಿಸುವಾಗಲೇ ಅವರ ಸಕಾರಾತ್ಮಕ ಮನಸ್ಸು ಎದ್ದು ನಿಲ್ಲುತ್ತದೆ. ಪ್ರತಿಯೊಬ್ಬ ಜೀವಿಗೂ ಇರಬೇಕಾದುದು ಇಂತಹ ಆಶಾವಾದಿತನ. ಇದೇ ನಿಜವಾದ ಮಾನವನ ಬದುಕು. ನಿರಾಶವಾದ ಜೀವನವನ್ನು ಮುಕ್ತಾಯಗೊಳಿಸಲು ಸಿದ್ಧವಾದರೆ ಆಶಾವಾದಿತನ ಜೀವನದ ಸಾರವನ್ನು ಜೀವಂತವಾಗಿರುತ್ತದೆ. ಪು.ತಿ.ನರ ಈ ಪ್ರಬಂಧದ ಮತ್ತೊಂದು ನೆಲೆ ಆಶಾವಾದಿತನವೇ.

---

[1] ಅದೇ, ಪು: 22

ಅವರು ಸೂಚಿಸುವಂತಹ ಅಂತರ್ಜ್ವರಕ್ಕೆ ಮುಂದೊಂದು ದಿನ ಮದ್ದೊಂದು ತಯಾರಾಗುತ್ತದೆ. ಏಕೆಂದರೆ ಮನುಷ್ಯನಲ್ಲಿರುವ ಶ್ರದ್ಧೆ, ಭಕ್ತಿ, ನಂಬಿಕೆಗಳೂ ಎಂದು ಸಾಯುವುದಿಲ್ಲ. ಮಾಸಬಹುದು. ಮುಂದೊಂದು ದಿನ ಬೇರೆ ಠೀವಿಯಿಂದ, ಬೇರೆ ರೀತಿಯ ವಿಜೃಂಭಣೆಯಿಂದ ವೈಭವದೊಡನೆ ಬರಬಹುದು. ಈ ರೀತಿ ಆಲೋಚನೆಯೇ, ಮನುಷ್ಯನ ಎಂತಹ ಹೇಡಿತನವು ಕರಗಿ, ಗುರಿಯನ್ನು ಮುಟ್ಟಲು ಸಹಾಯಮಾಡುವುದು. ಇಂತಹ ಆಶಾವಾದಾದ, ಮಾನವೀಯತೆಗಳ ದರ್ಶನವೇ ಈ ಪ್ರಬಂಧದ ಮೂಲಕ ವ್ಯಕ್ತಪಡಿಸುವ ಪು.ತಿ.ನ ರವರ ದರ್ಶನ ಎನ್ನಬಹುದು.

ದೈವಿಕವಾದ ನಂಬಿಕೆಯಿಂದ, ಮಾನವನ ಪ್ರಯತ್ನಗಳೂ, ಸಾಹಸಗಳೂ ಫಲಿತವಾಗುವುದು, ದೇವನಿಂದಲೇ ಎನ್ನುವ ಭಾಗವತ ನೋಟ ಕಾಣಸಿಗುವುದು ಇವರ 'ಮಳೆ' ಪ್ರಬಂಧದಲ್ಲಿ. ಮಾನವ ತಾನು ಮಾಡುವ ಪ್ರಯತ್ನವನ್ನು ಮಾಡಬೇಕು. ಆ ಪ್ರಯತ್ನ ಸಂಪೂರ್ಣ ಶರಣಾಗತಿಯನ್ನು ತೋರಿಸುತ್ತದೆ. ಆ ಶರಣಾಗತಿಯೇ ಬಾಳಿನ ಬೆಳಕಾಗುವುದು. ತನ್ನ ಕಷ್ಟವನ್ನೆಲ್ಲಾ ಪರಿಹರಿಸುವನು ಆ ದೈವವೇ ಎಂಬ ಬಲವಾದ ಭಾವನೆಯ ಸ್ವರೂಪ 'ಮಳೆ' ಪ್ರಬಂಧದಲ್ಲಿ ಕಂಡು ಬರುತ್ತದೆ.

ಯದುಗಿರಿಯಲ್ಲಿ ಮಳೆಬಾರದೆ ಹಾಹಾಕಾರವೆದ್ದಿದೆ. ಕೊಳಗಳೆಲ್ಲಾ ಬತ್ತಿ ಹೋಗಿರುವ ಸಂದರ್ಭ. ಊರಿನ ಐನೂರು ಬಾವಿಗಳಲ್ಲಿ ಕೇವಲ ಹತ್ತು ಹನ್ನೆರಡು ಬಾವಿಗಳಲ್ಲಿ ಒಂದು ನೂರು ಕೊಡ ನೀರಿರಬಹುದಾದ ಪರಿಸ್ಥಿತಿ. ಕೆರೆಯಲ್ಲಿ ಸ್ನಾನಕ್ಕೆಷ್ಟೋ ಅಷ್ಟಕ್ಕೆ ಅನುಕೂಲವಾಗುವಂತಹ ಪರಿಸ್ಥಿತಿ. ಬೇಸಿಗೆಯ ಬಿಸಿಲಿನ ಝಳ, ಮಳೆರಾಯನ ಕೋಪಕ್ಕೆ ಬೇರೆ ಯದುಗಿರಿ ತುತ್ತಾಗಿರುವಂತಹ ಸಂದರ್ಭದಲ್ಲಿ ಜನ ನಿರುಪಾಯರಾಗಿ ಜೀವನವೇ ದುರ್ಭರವೆನಿಸುವಂತಹ ಸ್ಥಿತಿಯಲ್ಲಿದ್ದಾರೆ. ಅಂತಹ ಸಮಯದಲ್ಲಿ ಇಂತಹ ದುರ್ಭರ ಸನ್ನಿವೇಶವನ್ನು ಎದುರಿಸಲು ಜನ ಸನ್ನದ್ಧರಾಗುತ್ತಾರೆ. ಯಾವ ರೀತಿ? ವೈಜ್ಞಾನಿಕವಾದ ರೀತಿಯಲ್ಲಲ್ಲ. ದೈವಿಕ ನಂಬಿಕೆಗಳ ಮೂಲಕ ಊರಿನಾಚೆ ಎರಡು ಮೈಲಿ ದೂರದಲ್ಲಿರುವ ಒಂಭತ್ತು ಕಲ್ಲಿನ ಬಾವಿಯಿಂದ ಒಂಭತ್ತು ದಿನ ನೀರು ಹೊತ್ತುಕೊಂಡು ಬೆಟ್ಟದ ಮೇಲಿರುವ ಯೋಗಾನರಸಿಂಹನಿಗೆ ಸಹಸ್ರ ಕುಂಭಾಭಿಷೇಕ ಮಾಡುವುದು. ಇದರಿಂದ ಯೋಗಾನರಸಿಂಹನು ಎಚ್ಚತ್ತು ತಮ್ಮ ಊರಿಗೆ ಮಳೆ ಬರಿಸುತ್ತಾನೆನ್ನುವ ನಂಬಿಕೆ. ಈ ನಂಬಿಕೆ ಎಷ್ಟು ವಿಶಾಲವಾಗಿದೆಯೆಂದರೆ, ಮಳೆಗೂ – ಯೋಗಾನರಸಿಂಹ ದೇವರಿಗೂ ಎಂತಹ ಸಂಬಂಧ? ಆದರೆ ಮಾನವನ ವಿಶಾಲ ನಂಬಿಕೆಗಳಿಗೆ ಕೊನೆಯಿಲ್ಲ. ಅದರಲ್ಲೂ ಭಾರತೀಯ ಮನಸ್ಸು ದೇವರನ್ನು ಮುಂದಿಟ್ಟುಕೊಂಡೇ ಎಲ್ಲಾ ಕೆಲಸ ಕಾರ್ಯಗಳನ್ನು ನಿರ್ವಿಘ್ನ ನಡೆಯುವಂತೆ ಮನವಿಮಾಡಿಕೊಳ್ಳುತ್ತದೆ. ಇಂತಹ ಮನಸ್ಸು ವಿಶಿಷ್ಟಾದ್ವೈತದಲ್ಲಿ ವಿಶಿಷ್ಟವಾಗಿ ಆಚರಿಸಿಕೊಳ್ಳುವುದನ್ನು ನಾವು ನೋಡಬಹುದು.

ವಿಶಿಷ್ಟಾದ್ವೈತದ ಸಿದ್ಧಾಂತದ ಪ್ರಕಾರ ಮನುಷ್ಯನ ಇಂತಹ ಶರಣಾಗತ ನೀತಿ ಅಂದರೆ ಭಗವಂತನ ದಯೆಗೆ ನಾವು ಕಾರಣರಾಗಬೇಕಾದರೆ ಒಂದು ಭಾವ ಅತ್ಯಂತ ಅವಶ್ಯಕ. ಈ ಭಾವವೇ ಶರಣಾಗತ ಭಾವ ಇದೇ ಭಾವ ಪ್ರಪತ್ತಿ ಎನಿಸಿಕೊಳ್ಳುತ್ತದೆ. "ನಾವು ನಮ್ಮನ್ನು ಕಾಪಾಡಿಕೊಳ್ಳಲು ಅಸಮರ್ಥರೆಂಬ ಭಾವ ನಮಗ

ಸ್ಪಷ್ಟವಾದಾಗ ನಾವು ಮತ್ತೊಬ್ಬರ ಸಹಾಯವನ್ನು ಬೇಡಲು ಅರ್ಹರಾಗುತ್ತೇವೆ. ಇಲ್ಲಿ ಸಮರ್ಥಗಳ ಉಪಾಯದ ಗೋಜಿಗೆ ಹೋಗದೆ ನಮ್ಮ ಅಸಹಾಯಕತೆಯನ್ನು ಅರಿತು ಆ ಸರ್ವಸಮರ್ಥನ ಬಳಿ ಬೇಡುವುದು. ತಾನು ಅಸಮರ್ಥನೆಂಬುದನ್ನರಿತಂತೆ ತನ್ನ ರಕ್ಷಣೆಯನ್ನು ಮಾಡುವವನಿವನೆಂಬ ನಂಬಿಕೆಯೇ ಪ್ರಪತ್ತಿ[1] ಈ ಪ್ರಪತ್ತಿಗೆ ವಿಶ್ವಾಸವೇ ಮುಖ್ಯ. ವಿಶ್ವಾಸವಿಲ್ಲದಿದ್ದರೆ ಅದು ಪ್ರಪತ್ತಿಯಾಗುವುದಿಲ್ಲ. ಅದರಿಂದ ದೇವರ ಮೊರೆ ಹೊಕ್ಕಾಗ ಯಾವುದು ಸಂಪೂರ್ಣ ವಿಶ್ವಾಸನೀಯ ಶರಣಾಗತಿಯೋ ಅದೇ ಪ್ರಪತ್ತಿ. ವಿಶಿಷ್ಟಾದ್ವೈತದಲ್ಲಿ ಭಕ್ತಿ ಮತ್ತು ಪ್ರಪತ್ತಿ ದೇವರನ್ನು ಒಳಗೊಳ್ಳುವ ಎರಡು ಮೂಲ ನೆಲೆಗಳು.

'ಮಳೆ' ಪ್ರಬಂಧದಲ್ಲಿ ಎದ್ದು ಕಾಣುವುದು ಇಂತಹ ಪ್ರಪತ್ತಿಯೇ?. ಹೌದು ಊರಿನ ಬ್ರಾಹ್ಮಣರೆಲ್ಲಾ ಬರಪರಿಹಾರಕ್ಕಾಗಿ ಯೋಗಾ ನರಸಿಂಹನನ್ನು ನಂಬಿ ಶರಣಾಗತರಾಗುವುದು. ಇಲ್ಲಿ ಆಧುನಿಕ ಮನಸ್ಸು ಇಂತಹ ನಂಬಿಕೆಗಳಿಗೆ ತಲೆಬಾಗುವುದಿಲ್ಲ. ಇವನ್ನು ಪು.ತಿ.ನ ರವರೇ ಗ್ರಹಿಸಿದ್ದಾರೆ. ಆದರೆ ಇಂತಹ ಭಕ್ತಿ ಪ್ರಧಾನ ನಂಬಿಕೆಗಳಿಗೆ ತರ್ಕ ಮಾಡಬಾರದು ಎನ್ನುವ ವಿವೇಚನೆಯನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಬ್ರಾಹ್ಮಣರು ಇಂತಹ ಕಷ್ಟದ ಹರಕೆ ತೀರಿಸಲು ಸನ್ನದ್ಧರಾಗಿರುವುದು ಲೋಕ ಪ್ರಯೋಜನಕ್ಕಾಗಿಯೇ ವಿನಃ ಸ್ವಾರ್ಥಪರವಾಗಿಯಲ್ಲ.

ಒಂದು ಒಳ್ಳೆಯ ಧ್ಯೆಯಕೊಸ್ಕರ ನಡೆಯುವ ಕೆಲಸಕ್ಕೆ ತಾನು ಸೇರಿದೆ ಎನ್ನುತ್ತಾರೆ. ಪು.ತಿ.ನ. ಒಂಭತ್ತು ದಿವಸ ಬಹಳ ಕಷ್ಟದಿಂದ ವಯಸ್ಕರು, ಮುದುಕರು ಎನ್ನದೇ ಬೆಟ್ಟಕ್ಕೆ ನೀರೊರುತ್ತಾರೆ. ಆದರೆ ಯಾರಿಗೂ ಆ ಕಷ್ಟ ಕಷ್ಟವೆನಿಸುವುದಿಲ್ಲ. ನರಸಿಂಹ ನಡೆಸಿದ ಅನೇಕ ಪವಾಡಗಳ ಕತೆಗಳನ್ನು ಸ್ಮರಿಸುತ್ತಾ ದೈವದ ಸ್ಮರಣೆ ಮಾಡುತ್ತಾ ಒಂಭತ್ತು ದಿನ ನೀರನ್ನು ಹೊತ್ತು ಅಭಿಷೇಕ ಮಾಡುತ್ತಾರೆ. ಹತ್ತನೇ ದಿವಸ ಸಹಸ್ರಾಭಿಷೇಕದ ಮುಕ್ತಾಯದ ಹಂತ. ಅಂದು ಮಳೆ ಬಾರದಿದ್ದರೆ ಒಂಭತ್ತು ಕಲ್ಲಿನ ಬಾವಿಯೂ ಹಿಂಗಿ ಹೋಗುವಂತಹ ಪರಿಸ್ಥಿತಿ. ಅಂತಹ ಸಮಯದಲ್ಲೂ ಯದುಗಿರಿಯ ಜನರ ಭಕ್ತಿ ಗಣನೀಯ. ಅಭಿಷೇಕ ಬಹುವಿಜೃಂಭಣೆಯಿಂದ ನಡೆಯಿತು. ಮಳೆ ಬರಲಿ ಬಾರದಿರಲಿ ದೇವರಿಗೆ ಬಲು ತಂಪಾಯಿತು; ಜನಕ್ಕೊಂದು ತೆರದ ಭಕ್ತಿಯ ಪೆಂಪಾಯಿತು; ಸಮಾರಾಧನೆ ಸೊಂಪು ಆಯಿತು" ಎನ್ನುತ್ತಾರೆ.[2]

ಆದರೆ ಜನರ ನಂಬಿಕೆ ಸುಳ್ಳಾಗುವುದಿಲ್ಲ. ತಾವು ನಂಬಿದ ದೈವ ಅವರಿಗೆ ಮೋಸವನ್ನು ಮಾಡುವುದಿಲ್ಲ. ತಾರಕ ನರಸಿಂಹನಿಗೆ ಮಾಡಿದ ಅಭಿಷೇಕ ಸಾರ್ಥಕತೆಯನ್ನು ಪಡೆಯುತ್ತದೆ. ಇಡೀ ಯದುಗಿರಿಯೇ ಮುಳುಗಿ ಹೋಗುವಂತೆ ಮಳೆ ಸುರಿಯಲು ಪ್ರಾರಂಭಿಸುತ್ತದೆ. ಇಡೀ ಯದುಗಿರಿಯೇ ಸಂತೋಷ ಸಾಗರದಲ್ಲಿ ಮುಳುಗುತ್ತಾ ಹೋಗುತ್ತದೆ. ಇಂತಹ ಸಂತೋಷಕ್ಕೆ ಕಾರಣ ಮಾನವನಿಗೆ ದೈವದ ಮೇಲಿರುವ ಶ್ರದ್ಧೆ ಎನ್ನುತ್ತಾರೆ ಪು.ತಿ.ನ ರವರು. ಇಂತಹ ಆನಂದಕ್ಕೆ ಕಾರಣ ನಾವು ಹತ್ತು ದಿನ ನಡು ಬಿಸಿಲಿನಲ್ಲಿ ಅಭಿಷೇಕದ ನೀರನ್ನು ಮಲೆಗೆ ಹೊತ್ತ ಶ್ರದ್ಧೆ ಶ್ರಮ ಕಾರಣ. ಅಜ್ಞಾನವೆನ್ನುತ್ತೀರಾ?

---

[1] ರಾಮಾನುಜದರ್ಶನ ಪು: 186

[2] ಮಳೆಃ ಪುಃ 37 ಗ್ರಃ ಸ.ಗ. ಸಂಪುಟ

ಈ ಅಜ್ಞಾನದಿಂದ ಎಂಥ ಮಹಾದಾನಂದ ನಮಗಿಂದು ದೊರಕಿತು! ನಮ್ಮ ಮಳೆ, ನಮ್ಮ ವೃದ್ಧಯೋಗಾನರಸಿಂಹ ನಮಗೆ ಎಷ್ಟು ಪ್ರಿಯರಾಗಿಬಿಟ್ಟಿದ್ದಾರೆ. ನಾವು ಏನು ಮಾಡದೆ ಸುಮ್ಮನೆ ಶೋಕಮೂಕರಾಗಿ ಕೂತಿದ್ದರೂ ಈ ಮಳೆ ಬರುತ್ತಿತ್ತೇನೊ. ಆದರೆ ಇಷ್ಟು ಸಂತೋಷ ನಮಗಾಗುತ್ತಿರಲಿಲ್ಲ. ಗರುಕೆ ಅಲ್ಲಾಡಿದರೆ ಕಾರೆ ನೋಯುವುದಂತೆ. ನರ್ಮ್ಮಾರ್ತ ಶ್ರದ್ಧೆ ಮುಗಿಲನ್ನಳ್ಳಾಡಿಸದೆ? ಬದುಕಿಸಿದೆಯಾ ನಮ್ಮಪ್ಪ, ನರಸಿಂಹ![1]

ಇದನ್ನು ಗಮನಿಸಿದರೆ ಪು.ತಿ.ನರದು ಎಂತಹ ಜೀವನ ಶ್ರದ್ಧೆ. ಕನ್ನಡ ಸಾಹಿತ್ಯ ಪ್ರಪಂಚದ ನವೋದಯ ಸಾಹಿತ್ಯದ ಮೂವರು ಪ್ರಸಿದ್ಧ ಕವಿಗಳಲ್ಲಿ ಕುವೆಂಪು ದೇವರನ್ನು ತಿರಸ್ಕರಿಸಿದರು, ಬೇಂದ್ರೆ ಮಧ್ಯದ ಸ್ಥಿತಿಯಲ್ಲಿದ್ದರೂ, ಆದರೆ ಪು.ತಿ.ನ ರವರ ದೈವಶ್ರದ್ಧೆ ಪ್ರಾಚೀನ ಆಚಾರ್ಯರ ಸ್ಮರಣೆ ಮಾಡುವಂತೆ ಮಾಡುತ್ತದೆ. ಒಂದು ಆಧುನಿಕ ಮನಸ್ಸು ನಂಬುವ ಇಂತಹ ಶ್ರದ್ಧೆ ಬದುಕಿಗೆ ಕೇಡನ್ನಂತೂ ಉಂಟು ಮಾಡುವುದಿಲ್ಲ. ಒಬ್ಬ ಮನುಷ್ಯ ನಾಗರಿಕನಾಗಿ, ಶ್ರದ್ಧಾವಂತನಾಗಿ ಬಾಳುವಂತಹ ಗುಣವನ್ನು ಮಾತ್ರ ಕಲ್ಪಿಸಿಕೊಡುತ್ತಾ ಹೋಗುತ್ತದೆ. ಬಹುಶಃ ಈ ಕಾರಣಗಳಿಂದಲೇ ಇವರು ಆಧುನಿಕ ಆಚಾರ್ಯರೆನಿಸಿಕೊಂಡಿದ್ದಾರೆ. ಪರಮಭಾಗವತರೆನಿಸಿಕೊಂಡಿದ್ದಾರೆ.

ಇಂತಹುದೇ ಭಕ್ತಿ ಆರಾಧನೆಯ ಚಿತ್ರ ನೀಡುವಂತಹ ಪ್ರಬಂಧ 'ನಾರಾಯಣ ಗುಡಿಯಲ್ಲಿ' ಚೆಲುವ ನಾರಾಯಣನನ್ನು ಬಣ್ಣಿಸುತ್ತಾ, ಅವನಿಗೆ ಇಡೀ ಊರೇ ಶರಣಾಗತರಾದ ಬಗ್ಗೆ ಪ್ರಸ್ತಾಪಿಸುತ್ತಾರೆ. ಈ ಸುಂದರ ಶ್ಯಾಮವಿಗ್ರಹಕ್ಕೆ ನಮ್ಮೂರು ಅದು ಹುಟ್ಟಿದಂದಿನಿಂದ ತನ್ನ ಸರ್ವಸ್ವವನ್ನು ಮೀಸಲಾಗಿಟ್ಟು ಬಿಟ್ಟಿದೆ. ಜನತೆಯು ಈ ಮೂರ್ತಿಯನ್ನು ತನ್ನ ನಿಧಿಯೆಂದು ಅಲ್ಲ, ತಂದೆಯೆಂದು ಭಾವಿಸಿಕೊಂಡಿದೆ. ತಮ್ಮ ಸತ್ವವೆಲ್ಲವನ್ನೂ ಈ ಸಂಸಾರೋತ್ತಾರಕನೂ ತಮಗಾಗಿ ಕಾದಿಟ್ಟು ಕೊಂಡಿದ್ದಾನೆ ಎಂದವರ ನಂಬಿಕೆ, ಅವರ ಆಸೆಗಳ ಸಮರ್ಪಣೆ ಇಲ್ಲಿ. ಕಂಬನಿಯ ನಿವೇದನ ಇಲ್ಲಿ. ನಚ್ಚಿನ ಭಂಡಾರವಿಲ್ಲಿ. ಸಂತೋಷದ ಸೂರೆ ಇಲ್ಲಿ, ಇವನಿಗೂ–ಜನಕ್ಕೂ ಇರುವ ಸಂಬಂಧ ಪ್ರಭುವಿಗೂ, ಭೃತ್ಯನಿಗೂ, ತಂದೆಗೂ – ಮಗನಿಗೂ, ಪ್ರಿಯನಿಗೂ - ಪ್ರೇಯಸಿಗೂ, ಗೆಳೆಯನಿಗೂ ಇರುವ ಸಂಬಂಧಗಳಿಗಿಂತಲೂ ಹೆಚ್ಚು ಧೃಡವಾದ, ಹೆಚ್ಚು ಗಾಢವಾದ, ಹೆಚ್ಚು ನಿಜವಾದ ಸಂಬಂಧವೂ ನಮ್ಮೂರಿನವರಿಗೂ, ಈ ಮೂರ್ತಿಗೂ ಇದೆ. ಕಷ್ಟಗಳ ಸುರಿಮಳೆಯಲ್ಲೂ ಈ ಸಂಬಂಧ ಸಡಿಲುವುದಿಲ್ಲ.[2]

ಇಂತಹ ದೈವ ನಂಬಿಕೆಯ ಜೀವನ ಸಿದ್ಧಾಂತವುಳ್ಳ ಯದುಗಿರಿಯ ಜನವೇ ಒಂದು ದೈವಿಕ ನೆಲೆಯುಳ್ಳವರು ಎನ್ನಬಹುದು. ಹೀಗೆ ನಂಬಿಕೆ ಇಟ್ಟು ತಮ್ಮ ಮನದೇವರಿಗೆ ನಿತ್ಯ ಪಾರ್ಥನೆ ನೆರವೇರಿಸುತ್ತಾರೆ. ಒಂದು ದಿನ ಪು.ತಿ.ನ ನಾರಾಯಣನ ದರ್ಶನ ಮಾಡಿ ನೆರೆದ ಜನರನ್ನು ಗಮನಿಸುವಾಗ ಅನೇಕ ರೀತಿಯ ಪ್ರಾರ್ಥನೆಗಳನ್ನು, ಅವರಿಗನುಸಾರವಾದ ಭಕ್ತರನ್ನು ಗಮನಿಸುತ್ತಾರೆ. ಅಂತಹ ಸಂದರ್ಭದಲ್ಲಿ ಅವರ ಕಣ್ಣಿಗೆ ಬೀಳುವುದು ಒಬ್ಬಳು ಮುದುಕಿ. ಸಂಪೂರ್ಣ ಅಲಂಕಾರದಿಂದ ಅಂದರೆ ನಾನಾ ರೀತಿಯ ಒಡವೆಗಳನ್ನು ಧರಿಸಿಕೊಂಡು ಬೆಳ್ಳಿತಟ್ಟೆಯಲ್ಲಿ ಹಣ್ಣು ಹೂ ಹಿಡಿದು

---

[1] ಮಳೆಃ ಪುಃ 39

[2] ನಾರಾಯಣ ಗುಡಿಯಲ್ಲಿ ಪು: 26

ನಿಂತಿರುವವರು. ತಕ್ಷಣ ಆ ಮುದಕಿಯ ಬಗೆಗೆ ಒಂದು ಅಸಹನೆ ಇವರಲ್ಲಿ ಉಂಟಾಗುತ್ತದೆ. ಈ ವಯಸ್ಸಿನಲ್ಲಿ ಇಂತಹ ಅಲಂಕಾರವೇ ಎನಿಸುತ್ತದೆ.

ಈ ಮುದುಕಿ ಅವರಿಗೆ ತಿಳಿದ ಶೇಷಮ್ಮನೇ, ನಂತರ ಶೇಷಮ್ಮನವರು ಇವರನ್ನು ಮಾತಾನಾಡಿಸಿದಾಗ ಅವರ ಮುಖದ ಮುದ್ರೆಗೂ – ಅವರ ಅಲಂಕಾರದ ಒಡವೆಗೂ ಸಂಬಂಧವೇ ಇಲ್ಲದಿರುವುದು ಇವರ ಮನಸ್ಸಿಗೆ ತಾನು ಯೋಚಿಸಿದುದನ್ನು ಕುರಿತು ನಾಚಿಕೆ ಪಡುವಂತಾಗುತ್ತದೆ. ಏಕೆ ಈ ರೀತಿ ಎಂದು ತಮ್ಮ ಸೋದರತ್ತೆಯನ್ನು ಕೇಳಿದಾಗ ಅವರು ಹೇಳಿದ ಕಥೆಗೆ ದಂಗುಬಡಿದಂತಾಗುತ್ತದೆ. ಶೇಷಮ್ಮನವರಿಗೆ ಒಬ್ಬನೇ ಮಗ ಬಹಳ ಕಷ್ಟ ಪಟ್ಟು ಅವನನ್ನು ಸಾಕಿ ಇಂಗ್ಲೀಷನ್ನು ಓದಿಸುತ್ತಾರೆ. ಬೊಂಬಾಯಿಯಲ್ಲಿ ಕೆಲಸ ಸಿಕ್ಕಿದ ತಕ್ಷಣ ಅಲ್ಲಿಗೆ ಹೋಗಿ ದುಡಿಯುತ್ತಿರುತ್ತಾನೆ. ಮದುವೆಯು ಗೊತ್ತಾಗುತ್ತದೆ. ಆದರೆ ಆತ ಬಾಂಬೆಯಲ್ಲಿ ಮರಣಹೊಂದುತ್ತಾನೆ. ತಾನು ಸಾಯುವ ಮುಂಚೆಯೇ ತನ್ನ ತಾಯಿಗಾಗಿ ಪೀತಾಂಬರವನ್ನು ತೆಗೆದಿಟ್ಟಿರುತ್ತಾನೆ. ಆದರೆ ಆ ತಾಯಿ ಉಡುವುದನ್ನು ಕಾಣದೇ ಮರಣಹೊಂದುತ್ತಾನೆ. ಆ ಕಾರಣದಿಂದ ತನ್ನ ಮಗ ತೀರಿದ ದಿನದಂದು ಆ ಪೀತಾಂಬರವನ್ನು, ಉಟ್ಟು, ಅಲಂಕಾರಭೂಷಿತರಾಗಿ ದೇವರಿಗೆ ಸೇವೆ ಸಲ್ಲಿಸುತ್ತಾರೆ. ಈ ರೀತಿ ದೇವರಿಗೆ ಸಲ್ಲಿಸಿದರೆ ಆತನಾತ್ಮಕ್ಕೆ ತೃಪ್ತಿಯೆನ್ನುವ ಒಂದು ಹಿರಿದಾದ ನಂಬಿಕೆ ಅವರಿಗೆ ಎನ್ನುವುದು. ಇದೆಂತಹ ನಂಬಿಕೆ. ತಾನು ನಂಬಿದ ದೈವ ತನ್ನ ಕೈಬಿಟ್ಟಾಗಲೂ ಅವನ ಮೇಲಿರುವ ಭಕ್ತಿ ಕುಂಠಿತವಾಗದಿರುವುದು. ತನ್ನ ದುಃಖದ ಬಾರವನ್ನು ಅವನ ಮುಂದಿರಿಸಿ ತನ್ನ ಅಳಲನ್ನು ತೋಡಿಕೊಳ್ಳುವ ಬಗೆ ಇದನ್ನೆ ಶ್ರೀ ವೈಷ್ಣವಧರ್ಮ ಭಕ್ತಿ - ಪ್ರಪತ್ತಿ ಎಂದು ಬಿನ್ನವಿಸುತ್ತದೆ.

ಇಂತಹ ಜೀವನ ಸಿದ್ಧಾಂತ ಮನುಷ್ಯ ಕ್ರೂರಿಯಾಗದೇ ಸಹನ ಶೀಲನಾಗಿ ಬದುಕುವ ನೀತಿಯನ್ನು ಕಲಿಸಿಕೊಡುತ್ತದೆ. ತಮಗಾದ ಕಷ್ಟವನ್ನು ದೈವ ಸಂಕಲ್ಪವೆಂದು ಬಗೆದು ಅವನನ್ನೆ ನಂಬಿ ಬದುಕುವಂತಹ ಒಂದು ದರ್ಶನವನ್ನೆ ಈ ಪ್ರಬಂಧ ನೀಡುತ್ತದೆ. ಇದೇ ಭಾವವನ್ನು ಒಳಗೊಂಡಿರುವ ಅವರ ಒಂದು ಅದ್ಭುತ ಕಾವ್ಯ 'ಪತಿತ ಪಾವನ'. ನಾರಾಯಣನ ಗುಡಿಯಲ್ಲಿ ಪೂಜೆ ನಡೆಯುವ ಹೊತ್ತಿಗೆ ಅನೇಕ ಜನ ಸೇರಿರುತ್ತಾರೆ. ಅದರಲ್ಲಿ ವಿಧವೆ ಹೆಂಗಸೊಬ್ಬಳು ಬಂದು ನಿಂತಿರುತ್ತಾಳೆ. ಎಳೆಯ ಪ್ರಾಯ, ಕಣ್ಣಲ್ಲಿ ಮುಖದಲ್ಲಿ ದುಃಖದ ಹೊನಲು, ಆ ದುಃಖದ ಹೊನಲನ್ನು ತಾಳದೇ ದೇವರ ಮುಂದೆ ಹೋಗಿ ತನ್ನ ನಿವೇದನೆಯನ್ನು ಸಲ್ಲಿಸುತ್ತಿರುತ್ತಾಳೆ. ಗುಡಿಯಲ್ಲಿಯೂ ವೇದ ಘೋಷ ನಡೆಯುತ್ತಿದೆ. ಪತಿತರನ್ನು ಮೇಲಕ್ಕೆತ್ತುವ, ಅವರನ್ನು ಸಲಹುವ ಮಂತ್ರಗಳ ಉಚ್ಚಾರಣೆ.

ಇಂತಹ ಸಮಯದಲ್ಲಿ ವೇದಘೋಷ ಇದಕ್ಕಿದ್ದ ಹಾಗೆ ನಿಲ್ಲುತ್ತದೆ. ಏಕೆ ಎಂದು ವಿಚಾರಿಸಿದರೆ ನಾಮುಗಳಿಂದಲೇ ತನ್ನಮೈಯನ್ನು ಮುಚ್ಚಿರುವ ಬ್ರಾಹ್ಮಣನೊಬ್ಬ ವಿಧವೆ ಹೆಂಗಸನ್ನು ಪತಿತೆಯೆಂದು ಜರಿದು ಇಂಥವರಿದ್ದರೆ ದೇವಾಲಯವು ಅಶುಚಿಯಾಗುತ್ತದೆಂದು, ಅವಳನ್ನು ಮೊದಲು ಹೊರಗೆ ದೂಡಿ

ಎನ್ನುತ್ತಾನೆ. ಎಲ್ಲರೂ ನೂರೊಂದು ಮಾತಾಡುತ್ತಾರೆ. ಆ ಅವಮಾನವನ್ನು ಸಹಿಸದೇ ಆಕೆ ಹೊರಗೆ ಓಡಿಹೋಗುತ್ತಾಳೆ. ಪು.ತಿ.ನ ರಿಗೆ ತಾವೂ ಸಹ ಇದಕ್ಕೆ ಭಾಗಿಯಾದದ್ದು ನೋವಿನ ಸಂಗತಿಯಾಗುತ್ತದೆ.

ನಾವು ಶುದ್ದರೆಂದು ಇಲ್ಲಿ

ಎದೆಯ ಮುಟ್ಟಿ ನುಡಿವರಾರು?
ಬಡವೆಯೆಂದು ಹಳಿವಿರೇನೊ
ನಿಮ್ಮ ತಂಗಿಯ?
ಸಭೆಯೊಳಿಂತು ಹೆಣ್ಣುತನದ
ಮಾನ ಮುರಿಯಲೆಳಸಲುಂಟೆ?
ಬಿಡಿರಿ" ಎನ್ನುವವನ ನುಡಿಯು
ಗಾಳಿಯಾಯ್ತಿತು?[1]

ಈ ಕವನ ಗಮನ ಸೆಳೆಯುವುದು ಬೇರೆಯೇ ಕಾರಣಕ್ಕಾಗಿ ಬರಿಯ ನಾಮ, ಪಂಚೆ ಬ್ರಾಹ್ಮಣತ್ವವನ್ನು ಕೊಡುವುದಿಲ್ಲ ಎನ್ನುವುದನ್ನು ಸಾರಿ ಹೇಳುತ್ತಾರೆ, ಪು.ತಿ.ನ.ರವರು, ಮನುಷ್ಯನಿಗೆ ಬೇಕಾಗಿರುವುದು ಶುದ್ಧ ಮನಸ್ಸು. ಆಕಸ್ಮಾತ್ ಆ ಹೆಂಗಸು ತಪ್ಪು ಮಾಡಿದ್ದರೂ ಅವಳನ್ನು ನಿಂದಿಸುವಂತಹ ನೀತಿ ಸರಿಯಾದುದಲ್ಲ ಎಲ್ಲರೂ ಈ ಜಗತ್ತಿನಲ್ಲಿ ತಪ್ಪು ಮಾಡುವವರೇ, ಯಾರು ಶುದ್ದರೆಂದು ಹೇಳಿಕೊಳ್ಳಲು ಸಾಧ್ಯವಿಲ್ಲ. ಬಡತನವಿರುವುದರಿಂದಲೇ ಅವಳನ್ನು ಸಲಹುವವರಿಲ್ಲ ಎಂಬ ನೇರ ಆರೋಪವನ್ನು ಪು.ತಿ.ನ ಮಾಡಲು ಪ್ರಯತ್ನ ಪಡುತ್ತಾರೆ. ಆದರೆ ಈ ಪ್ರಸಂಗದಿಂದ ಮುಂದೆ ಈ ಹೆಂಗಸು ಯಾರಿಗೂ ತನ್ನ ಮುಖವನ್ನು ತೋರದೆ ಊರಾಚೆಯ ಗುಡಿಸಲಿನಲ್ಲಿ ವಾಸಮಾಡುತ್ತಾಳೆ. ಹಾಗಾದರೆ ಅವಳ ಜೊತೆಗ್ಯಾರು? ಈ ಪ್ರಶ್ನೆಗೆ ಅದ್ಭುತ ಉತ್ತರ ನೀಡುತ್ತಾರೆ ಈ ರೀತಿಯಲ್ಲಿ ಪು.ತಿ.ನ.

ಹುಲ್ಲು ಮನೆಯ ಮೂಲೆಯೊಳಗೆ
ಹಣತೆಯೊಂದು ಮಿನುಗುವಲ್ಲಿ
ಅವಳ ಜೊತೆಯೊಳಿರಲು – ರಾಮ
ಪತಿತ ಪಾವನ"[2] ಈ ಕವನ ನೆನಪಿಸುವುದು ಪು.ತಿ.ನ ರ ಗೋಕುಲ ನಿರ್ಗಮನವನ್ನು ಅಲ್ಲಿ ಹೇಳುವ ಹಾಗೇ "ನನ್ನೊಳು ನಾ ನಿನ್ನೊಳು ನೀ"

ಒಲಿವ ಮುಂತಿಂತೆ ನಾ ನೀ
ನಿನ್ನೊಳು ನಾ ನನ್ನೊಳು ನೀ
ಒಲಿದ ಮೇಲಿಂದ ನಾ ನೀ[3]

ಅದ್ಭುತ ದೈವ ಭಕ್ತ, ದೇವರಿಗೆ ಎಂತಹ ಭಕ್ತ ಬೇಕೋ, ದೇವರನ್ನು ಭಜಿಸಲೂ ಎಂತಹ ಶುದ್ಧ ಮನಸ್ಸಿರಬೇಕು, ಎಂತಹ ಶ್ರದ್ಧೆ ಮುಖ್ಯವಾಗುತ್ತದೆ ಎನ್ನುವುದನ್ನು ಶುದ್ಧ ಮನಸ್ಸಿನಿಂದಲೇ ನೀಡುವ ಪು.ತಿ.ನ ನಿಜವಾಗಲೂ ಕನ್ನಡ ಸಾರಸ್ವತಲೋಕದ ಒಬ್ಬ ಅಸ್ತಿಕ ಸಾಹಿತಿ ಎನ್ನಬಹುದು.

---

[1] ಪತಿತಪಾಪನ - ಪು – 57
[2] ಪತಿತ ಪಾವನ ಪು-58
[3] ಗೋಕುಲ ನಿರ್ಗಮನ

ಈ ಎಲ್ಲಾ ಪ್ರಬಂಧಗಳೂ ದೈವ ಸಂಕಲ್ಪದಿಂದ, ಅದನ್ನು ನಂಬಿ ನಡೆಯುವ ಜನರ ಜೀವನ ಸಿದ್ಧಾಂತ ಕಥೆಗಳನ್ನೂ ಒಳಗೊಂಡಿದ್ದರೆ ಸ್ವಲ್ಪ ಬೇರೆ ಸ್ವರೂಪವನ್ನು ಪಡೆದ ವ್ಯಕ್ತಿ ವೈಚಿತ್ರ್ಯದ ಅದ್ಭುತ ಸಿದ್ಧಾಂತವೊಂದನ್ನು ಒಂದು ಪ್ರಬಂಧ ಹೇಳುತ್ತದೆ. ಆ ಸಿದ್ಧಾಂತವನ್ನು ಕಟ್ಟಿಕೊಡುವ ವ್ಯಕ್ತಿ 'ಕೊಳಂದೆ' ಪ್ರಬಂಧದ ಶೀರ್ಷಿಕೆಯು ಇದೇ. ಈತನ ಕೆಲಸ ನಾರಾಯಣ ದೇಗುಲದಲ್ಲಿ ಅಡುಗೆಯವರಿಗೆ ಪ್ರಾಕಾರದ ಬಾವಿಯಿಂದ ನೀರನ್ನು ಸೇದಿ ಅಡುಗೆ ಮನೆಯ ತೊಟ್ಟಿಯನ್ನು ತುಂಬುವುದು, 'ಕೊಳಂದೆ' ಎಂದರೆ ಮಗು ಎನ್ನುವ ಅರ್ಥ. ಈತ ಮಗುವಲ್ಲ ವಯಸ್ಕ. ಈತನನ್ನು ಪು.ತಿ.ನ ಹೀಗೆ ವರ್ಣಿಸುತ್ತಾರೆ. "ಈ ದೇವಸ್ಥಾನದ ಒಂದು ಸುಂದರ ಕಲ್ಲು ಕಂಬದ ಬೋದಿಗೆಯಲ್ಲಿ ಈತನ ಪ್ರತಿಕೃತಿ ಮೇಲಿನ ತೊಲೆಯನ್ನು ಹೊತ್ತು ಕೊಂಡಿರುವಂತೆ ಕಡೆಯಲ್ಪಟ್ಟಿದೆ. ಅಂದಿನ ಶಿಲ್ಪಿಗೆ ಈತ ಬಿಂಬಿತವಾಗಿರಬೇಕಾದರೆ ಈ ಕೊಳಂದೆ ಎಷ್ಟು ಹಳಬನಾಗಿರಬಹುದು?[1] ಎಂದು.

ಒಂದು ರೀತಿಯ ಒರಟು ಸ್ವಭಾವ ಒರಟು ರೂಪದ ಇವನು ಕತ್ತೆಯ ಹಾಗೆ ದುಡಿಯುವ ಶಕ್ತಿಯಿದ್ದವನು. ಐದು ಕೊಡದ ಹಿತ್ತಾಳೆಯ ಕೊಳದಪ್ಪಲೆಯಲ್ಲಿ ನೀರು ತುಂಬಿಕೊಂಡು, ಅದನ್ನು ತಲೆಯ ಮೇಲೆ ಹೊತ್ತುಕೊಂಡು ಬರುವಂತ ಶಕ್ತಿವಂತ, ಯಾರಾದರೂ ಮಾತಾನಾಡಿಸಿದರೆ ತಬ್ಬಿಬ್ಬಾಗಿ ಅತ್ತ ಇತ್ತ ನೋಡುತ್ತಾ ನಂತರ 'ಹ್ಣ' ಎನ್ನುವ ಸ್ವಭಾವದವನು. ಒಂದು ದಿನ ಅವನ ಪರಿಚಯಸ್ಥರಿಗೆ ಪ್ರಶ್ನೆ ಕೇಳುತ್ತಾನಂತೆ "ಮಾಮ ನನಗೊಂಡು ಕನಸು ಬಿತ್ತು ಆ ಕನಸು ನಿಜವೋ ಸುಳ್ಳೊ ಹೇಳು ಅದಕ್ಕವರು ಒಂದು ಸಂಖ್ಯೆ ಹೇಳು ಎಂದಾಕ್ಷಣ 'ಏಳು' ಎಂದು ಉಚ್ಚರಿಸುತ್ತಾನೆ. ತಕ್ಷಣ ಅವರು ಇದೇನಯ್ಯ - ನಿಜವೂ ಅಲ್ಲ, ಸುಳ್ಳು ಅಲ್ಲ ಈತರದ ಉತ್ತರ ಬಂದು ಬಿಟ್ಟಿತಲ್ಲಾ" ಎನ್ನಲೂ ನಾನು ಯಾವಾಗಲೂ ಹೀಗೆ ಒಂದು ದಿನವೂ ಸರಿಯಾಗಿ ಉತ್ತರ ಕೊಡುವುದಿಲ್ಲ ಈಗ ನೋಡಿ ನಾನು ಯಾವ ರೀತಿ ಕಾಣುತ್ತೇನೆ? ಪಂಡಿತರು ಸೂಕ್ಷ್ಮವಾಗಿ ದಿಟ್ಟಿಸಿ ಇದು ಯಾವ ಲೀಲಾಭೂತಿಯೆಂದು ಬೆರಗುಗೊಳ್ಳುತ್ತಾರೆ. ತಿಳಿಯಲಿಲ್ಲವೆ? ಎನ್ನುತ್ತಾ ತನ್ನ ಮೂಗನ್ನು ಸ್ವಲ್ಪ ಕೊಂಕಿಸುತ್ತಾ, ಕುಕ್ಕರಗಾಲಲ್ಲಿ ಕುಳಿತು ತೋಳುಗಳನ್ನು ರೆಕ್ಕೆಗಳಂತೆ ಬಡಿದು ಗಿಳಿಯ ಹಾಗೆ ಶಬ್ದಮಾಡುತ್ತಾನೆ. ನಾನು ಗಿಳಿಯ ಹಾಗಿಲ್ಲವೇ ಎನ್ನುತ್ತಾನೆ. ಪಂಡಿತರು ಖುಷಿಗೊಂಡು ಈ ವಿದ್ಯೆ ಎಲ್ಲಿ ಕಲಿತುಕೊಂಡೆ ಎಂದು ಆಶ್ಚರ್ಯದಿಂದ ಪ್ರಶ್ನಿಸಿದರೆ ನಾನು ಏನು ನೆನೆದು ಕೊಂಡರೆ ಅದಾಗ ಬಲ್ಲೆ ನನಗೆ ಕನಸಿನಲ್ಲಿ ಚಕ್ರತ್ತಾಳ್ವಾರ್ ಬಂದು ಈ ವರವನ್ನು ಕೊಟ್ಟರು ಎನ್ನುತ್ತಾನೆ. ಹಾಗಾದರೆ ಈಗ ಯಾರು ನೀನು ಎನ್ನುತ್ತಾರೆ. ಅವನು ಕೊಟ್ಟ ಉತ್ತರ ಆಶ್ಚರ್ಯಕರವಾಗಿರುತ್ತದೆ. ನೋಡಿ ಮಾಮಾ ಅವತ್ತು ಕೋತಿ, ಈವತ್ತು ಗಿಳಿ ಮೊನ್ನೆ ಎಮ್ಮೆ, ನಿನ್ನೆ ನಾಯಿ ಈಗ

---

[1] ಕೊಳಂದೆ, ಪು: 368

ನಾನಾರು? ಯಾರು ಅಲ್ಲ! ಇದೇ ಸುಖ ಮಾಮಾ[1] ಪಂಡಿತರು ಈ ಮಾತಿಗೆ ಬೆರಗಾಗುತ್ತಾರೆ. ಅವರು ಓದಿದ್ದ ಯಾವ ಶಾಸ್ತ್ರದಲ್ಲಿಯೂ ಸುಖದ ಅರ್ಥ ಇಷ್ಟು ಸ್ಪಷ್ಟವಾಗಿ ನಿರೂಪಿತವಾಗಿರಲಿಲ್ಲವೆನಿಸುತ್ತದೆ.

ಈ ಕೊಳಂದೆ ಪಾತ್ರ ಅರೆ ಹುಚ್ಚನಾಗಿ ಕಾಣುತ್ತ, ಮುಂದೆ ಒಬ್ಬ ವೇದಾಂತಿಯ ಮಾತಿನಂತೆ ದರ್ಶನ ನೀಡುತ್ತಾ ಹೋಗುತ್ತದೆ. ಕತ್ತೆಯ ಹಾಗೆ ದುಡಿಯುವ ಮನುಷ್ಯ ಬದುಕಿನಲ್ಲಿ ನಾನಾ ವೇಷಗಳನ್ನು ಧರಿಸಿ ಸುಖವನ್ನು ಹೊಂದಲು ಪ್ರಯತ್ನ ಪಡುತ್ತಾನೆ. ಈ ಸುಖಕ್ಕಾಗಿ ಅವನು ಆಡದ ಆಟವಿಲ್ಲ – ಹೂಡದ ವೇಷವಿಲ್ಲ. ಈ ವೇಷಾಂತರಗಳ ನಡುವೆ ನಾನು ಎನ್ನುವುದನ್ನು ಮರೆತು ಬಾಳುತ್ತಾ ಹೋಗುತ್ತಾನೆ. ಆದರೆ 'ನಾನು' ಎನ್ನುವುದು ಸ್ವಾರ್ಥಪರವಾದಾಗ, ನಾನಾತ್ವ ಹೆಚ್ಚಾಗಿ ಅದು ಅದು ಸುಖದ ಹೆಬ್ಬಾಗಿಲಿಗೆ ಮುಳುವಾಗಬಹುದು. ಆದರೆ ನಾನು ಎನ್ನುವುದು ಜಾಗೃತವಸ್ಥೆಗೆ ಒಂದು, ನಾನಾತ್ವದ ನಿರಾಕರಣೆಯಾದಾಗ ಸುಖ ತಾನಾಗೆಸಿಗುತ್ತದೆ.

ದಾಸವರೇಣ್ಯರು ಅನುಭವಿಸಿದ ಸುಖ, ಇಂತಹ ನಾನಾತ್ವವನ್ನು ತಿರಸ್ಕರಿಸಿದಾಗಲೇ ಎನ್ನುವುದು ನಮಗೆ ಚರಿತ್ರೆಗಳಿಂದ ತಿಳಿಯುತ್ತದೆ. ಪು.ತಿ.ನ ಇಲ್ಲಿ ಬಹಳ ಸರಳವಾಗಿ ಒಬ್ಬ ವ್ಯಕ್ತಿಯ ಮುಖಾಂತರ ನೀಡುವ ಈ ಸಿದ್ಧಾಂತ ಮನಸ್ಸಿಗೆ ಬಹಳ ಹತ್ತಿರವಾಗುತ್ತದೆ. ಇಲ್ಲಿ ಇನ್ನೊಂದು ಮುಖ್ಯ ಅಂಶವೂ ಸೇರುತ್ತದೆ. ಈ ಮನುಷ್ಯ ಲೋಕದಲ್ಲಿ ಯಾವುದು ನಿಕೃಷ್ಟವಲ್ಲ ಎಲ್ಲಕ್ಕೂ ಅದರದೇ ಆದ ಮೌಲ್ಯಗಳಿವೆ. ಯಾವುದು ತಿರಸ್ಕೃತವಲ್ಲ ಎನ್ನುವ ಭಾವ, ಇದೇ ಭಾವವನ್ನು ಈಚಲು ಮರದ ಕೆಳಗೆ ಎನ್ನುವ ಪ್ರಬಂಧ ಮತ್ತಷ್ಟು ದೃಢ ಪಡಿಸುತ್ತದೆ.

ಪು.ತಿ.ನ ರ 'ಈಚಲು ಮರದ ಕೆಳಗೆ' ಪ್ರಬಂಧ ಎರಡು ಮರಗಳ ಹೋಲಿಕೆಯ ಹಿನ್ನೆಲೆಯಲ್ಲಿ ಎರಡು ಪರಂಪರೆಯ, ಎರಡು ಸಂಸ್ಕೃತಿಯ ದರ್ಶನವನ್ನು ನೀಡುತ್ತದೆ. ಈ ಮರದ ಮೂಲಕವೇ ಪೂರ್ವ ಮತ್ತು ಪಶ್ಚಿಮಗಳ ಚಿಂತನೆಗಳನ್ನು ನೀಡುತ್ತಾ ಸಾಗುತ್ತಾರೆ. ಒಂದು ದಿನ ತಮ್ಮ ಗೆಳೆಯರಿಗಾಗಿ ಕಾಯುತ್ತಾ ಒಂದು ತೊರೆಯ ಬಳಿ ಇರುವ ಈಚಲು ಮರದ ಕೆಳಗೆ ಕುಳಿತುಕೊಳ್ಳುತ್ತಾರಂತೆ. ಕುಳಿತು ಈಚಲು ಮರವನ್ನು ನೋಡುತ್ತಾರಂತೆ, ಆ ಈಚಲು ಮರ ಪು.ತಿ.ನ ರಿಗೆ ಹೀಗೆ ಕಾಣಿಸುತ್ತದೆ.

ಕಾಶಕುಸುಮದ ಚಾಮರದಂತೆ ಇದರ ಗರಿಯ ನೆರಳು ಮೃದುವಾಗಿ ನನ್ನ ತಲೆಯ ಮೇಲೆ ಬೀಸುತ್ತಿತ್ತು, ನನಗೇನೋ ಹಾಯಾಯಿತು. ಆದರೆ ಈ ಸ್ವಾದುವಾದ ನೆರಳನ್ನು ಚೆಲ್ಲುತ್ತಿದ್ದ ಮರ ಈಚಲು ಮರ; ಒಂಟಿಯಾಗಿದ್ದರೂ ಅದು ದಿಟ್ಟವಾಗಿತ್ತು, ಅದರ ಗರಿಗಳು ಚಟುವಟಿಕೆಯನ್ನು ತೋರುತ್ತಿದ್ದವು. ಆ ಗರಿಗಳು ಸ್ತಬ್ಧವಾಗಿದ್ದಾಗ ಸಿಪಾಯಿಗಳ ಅಟೆನ್‌ಷನ್ ರೀತಿ, ಅಲುಗಾಡುವಾಗ ಕವಾಯತ್ತಿನ ರೀತಿ ತೋರುತ್ತಿದ್ದವು. ಅದು ಹಣ್ಣು ಹಿಡಿದ ಮರ, ಮರಕ್ಕೆ ಆ

[1] ಕೊಳಂದೆ: ಪು: 369

ಸಮಯದಲ್ಲೂ ಧ್ಯಾನಮೌನಗಳಿದ್ದಂತೆ ಕಾಣಲಿಲ್ಲ. ಸೂರ್ಯ ಸುಟ್ಟರೆ ಸುಡಲಿ, ಹಳ್ಳ ಒಣಗಿದರೆ ಒಣಗಲಿ, ತಾನೇನೋ ತಂಪಾಗಿದ್ದೇನೆ ಸಾಕು ಎನ್ನುವಂತಿತ್ತು ಅದು, ಅದನ್ನು ತುಸುಕಾಲ ನಿಟ್ಟಿಸಿ ಭಲಾಪ್ಪ ಎಂದೆ[1]

ಪು.ತಿ.ನ ರಿಗೂ, ಸೈನ್ಯ ಇಲಾಖೆಗೂ ನೆಂಟು ಏಕೆಂದರೆ ಇವರ ಉದ್ಯೋಗ ಸೈನಿಕ ಇಲಾಖೆಯಲ್ಲಿ. ಪಾಶ್ಚಾತ್ಯರ ಕೈಕೆಳಗೆ ಕೆಲಸ ಮಾಡಿದ್ದನ್ನು ಪು.ತಿ.ನ ಯಾವಾಗಲೂ ಸ್ಮರಿಸುತ್ತಾರೆ. ಈಚಲು ಮರದ ಚಟುವಟಿಕೆಗಳು ಪಾಶ್ಚಾತ್ಯರ ನಡುವಳಿಕೆಗಳ ಹಾಗೇ ತೋರುವುದೇ ಈ ಪ್ರಬಂಧದ ಮೂಲ ನೆಲೆ. ಈ ಕವಾಯತ್ತನ್ನು ತಮ್ಮ ಒಂದು ಕವನದಲ್ಲಿ ಹೀಗೆ ಬಿಂಬಿಸುತ್ತಾರೆ.

"ಇಕ್ಕೊ ಇಕ್ಕೊ ಹೆಂಗೈತೆ ಈ ಡ್ರಿಸ್ಸು
ಇಕ್ಕಿದರೇನೆ ಉಕ್ಕೈತೆ ಹುಮ್ಮಸ್ಸು
ಕಂಡ ಜನಕಾಗುತ್ತೈತೆ ಎದೆಯಳುಕು - ತಮ್ಮ
ನಮ್ಮೂರ್ನಾಗೆ ಯಾರ್ಗೈತೆ ಈ ತಳುಕು,
ಬೈಗು ಬೆಳಗು ಕವಾಯಿತ್ತು ಎಡಬಲ
ದಳವಾಯಿ ಅಂತಾನೆ ಭಲ ಭಲ[2]

ಈ ಕವನ ಮತ್ತು ಈಚಲು ಮರ ಎರಡು ನಮಗೆ ತೋರಿಸುತ್ತಿರುವುದು ಒಂದು ಪಾಶ್ಚಾತ್ಯ ಸಂಸ್ಕೃತಿಯ ದರ್ಶನವೆನ್ನಬಹುದು. ಒಂಟಿಯಾಗಿದ್ದರು ಯಾರಿಗೂ ಹೆದರದೆ ನಿಂತಿದ್ದ ಮರ, ಹಾಗೇಯೆ ಭಾರತಕ್ಕೆ ವ್ಯಾಪಾರಕ್ಕೆ ಬಂದ ಪಾಶ್ಚಾತ್ಯರು, ಭಾರತಕ್ಕೆ ಅಪರಿಚಿತರಾದರೂ ಯಾರಿಗೂ ಹೆದರದೆ, ಭದ್ರವಾಗಿ ನೆಲೆಯೂರಿದ್ದು ಇಲ್ಲಿ ನೆನಪಾಗುತ್ತದೆ. ಯಾರು ಏನಾದರೂ ಸರಿಯೇ? ತಾನು ಸುಖವಾಗಿದ್ದರೆ ಸಾಕು ಎನ್ನುವ ಭಾವವೇ ಪಾಶ್ಚಾತ್ಯರು ಭಾವನೆಯಾಗಿದ್ದ ರೀತಿಯಲ್ಲಿ, ಈಚಲುಮರ ತಾನು ತಂಪಾಗಿದ್ದೇನೆ ಎನ್ನುವ ರೀತಿಯಲ್ಲಿ ನಿಂತಿದ್ದು ಕಂಡು ಅದರ ಸಾಹಸದ ಮನಸ್ಸಿಗೆ ಬೆರಗಾಗುತ್ತಾರೆ.

ಹೀಗೆ ಅವರ ಮನಸ್ಸಿನ ಆಲೋಚನೆಗಳು ಮುಂದುವರೆಯುತ್ತಿರುವಾಗ ಈಚಲುಮರ "ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ" ಎನ್ನುತ್ತದಂತೆ. ಇವರಿಗೆ ಆಶ್ಚರ್ಯ ಈಚಲು ಮರಕ್ಕೆ ನಮ್ಮ ಪರಮ ಪವಿತ್ರ ಸಂಸ್ಕೃತಿಯ ಸುಭಾಷಿತ ಹೇಗೆ ತಿಳಿಯಿತು ಎಂದು. ತೆಂಗಿನ ಮರವಾದರೆ ನಮ್ಮ ಪುರಾಣ ಸಂಸ್ಕೃತಿಯ ಪ್ರತೀಕ, ಯಾವುದೇ ಶುಭಕ್ಕೂ, ಪೂಜೆಗೂ ಇದರ ಫಲವೇ ಬೇಕು. ಪರಂಪರೆಯಾ ಎಲ್ಲಾ ಸಂಸ್ಕೃತಿಗಳೂ ಇದಕ್ಕೆ ಸಹಜವಾಗಿಯೇ ದೊರೆತಿದೆ ಎನ್ನುತ್ತಾರೆ.

"ನಾರಿಕೇಳಕ್ಕೆ ಈ ಆರ್ಯ ಸಂಸ್ಕೃತಿಯ ಗಂಧ ಸಹಜವಾಗಿಯೇ ಉಂಟು, ಅದರ ಸಂತಾನವಿಲ್ಲದ ಪೂಜೆ ಎಲ್ಲಿ, ಪುರಸ್ಕಾರವೆಲ್ಲಿ, ವೈದಿಕ ಕರ್ಮವೆಲ್ಲಿ, ಫಲದಾನವೆಲ್ಲಿ? ಸಂಸ್ಕೃತ ಅದರ

---

[1] ಈಚಲು ಮರದ ಕೆಳಗೆ, ಪು:50

[2] ಸೈನಿಕರ ಹಾಡು, ಪು: 158

ರಸಗತವಾಗಿದ್ದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ತೆಂಗಿನ ಮರದಲ್ಲಿ ವೇದ ಘೋಷದ ಹೊಳಲಿದೆ, ಸಂಸ್ಕೃತದ ಶೈಲಿಯಿದೆ. ಆದರೆ ಈಚಲು ಮರಕ್ಕೆ ಈ ದೈವ ಭಾಷೆಯ ಪರಿಚಯ ಹೇಗಾಯಿತು? ಏಕೆಂದರೆ ಪುರಾಣಪ್ರವಚನ ನಡೆಯುವ ಸ್ಥಳಗಳಲ್ಲಿ ಇದಕ್ಕೆ ಇರುವುದಕ್ಕೆ ಅವಕಾಶವಿಲ್ಲ ಅಥವಾ ಇದು ಇರುವೆಡೆಯಲ್ಲಿ ಪುರಾಣಶ್ರವಣ ನಡೆಯುವುದಿಲ್ಲ. ವಿಶ್ವಮಿತ್ರಾನಿಂದ ಕಲಿಯಿತೆ? ಇದು ರಾವಣನಂಥ ಬ್ರಾಹ್ಮಣ ಮರವೇ ಆಗಿರಬಹುದೇ? ಇಂಥ ಮಡಿಜಾಗದಲ್ಲಿ ಇದು ಬೀಡು ಮಾಡಿಕೊಂಡು ದೇವಭಾಷೆಯಾಡುತ್ತಿದೆಯಲ್ಲಾ? ಇದನ್ನು ಎಂತು ಸಹಿಸುವುದು? ಇದನ್ನು ಏಕೆ ಕಡಿದುಹಾಕದೆ ಉಳಿಸಿಕೊಂಡಿದಾರೆ? ಇತ್ಯಾದಿ ದುರ್ಭಾವನೆಗಳು ನನ್ನಲ್ಲಿ ಉತ್ಪನ್ನವಾದವು[1]

"ಈಚಲು ಮರದ ಕೆಳಗೆ ಕುಳಿತು ಮಜ್ಜಿಗೆಯನ್ನು ಕುಡಿದರೂ ಅದು ಸಾರಾಯಿ" ಎಂದೇ ಭಾವಿಸುವ ಮನುಕುಲದಲ್ಲಿ ಈಚಲು ಮರದ ಬಗ್ಗೆ ಇರುವ ಅಪ್ರಿಯತೆ ತಿಳಿಯುತ್ತದೆ. ಅಂಥಹ ಈಚಲನ್ನು, ಕಲ್ಪವೃಕ್ಷವೆಂದು ಕರೆಯುವ ತೆಂಗಿನ ಮರದ ಜೊತೆಗೆ ಹೋಲಿಸುತ್ತಾ, ಈ ಮರಕ್ಕೆ ಇಂತಹ ಸಂಸ್ಕೃತಿ ಹೇಗೆ ಬಂತೆಂದು ಯೋಚಿಸುತ್ತಾ, ಇದನ್ನು ಹೀಗೆ ಬೆಳೆಯ ಬಿಟ್ಟವರಾರು? ಎನ್ನುತ್ತಾರೆ. ಇವರ ಚಿಂತನೆ ಹೀಗೆ ಹರಿದರೆ, ಇದನ್ನು ಗ್ರಹಿಸಿದ ಈಚಲಿಗೆ ಸಿಟ್ಟು ಬರುತ್ತದೆ.

"ನಿನ್ನನ್ನು ಅರಸಿಕೊಂಡು ನಾನು ಬರಲಿಲ್ಲ, ನನ್ನನ್ನು ಅರಸಿಕೊಂಡು ನೀನು ಬಂದಿದೀಯೆ, ಆದರೆ ನನಗೆ ಕೆಡಕನ್ನು ಯೋಚಿಸುತ್ತಿದ್ದೀಯೆ, ನನಗೆ ಯಾರ ಆಶ್ರಯವೂ ಬೇಕಿಲ್ಲ. ನನಗೆ ಇಷ್ಟ ಬಂದಕಡೆ ನಾನು ಬೆಳೆಯುತ್ತೇನೆ, ನನಗೆ ಸರ್ಕಾರದ ಬೆಂಬಲವಿದೆ ಎಂದು ತಿಳಿದುಕೊಂಡಿರಬಹುದು, ಯಾವ ಡಿಪಾರ್ಟ್‌ಮೆಂಟ್ ಎಷ್ಟು ಖರ್ಚುಮಾಡಿ ನನ್ನನ್ನು ಹುಟ್ಟುಹಾಕಿ ಬೆಳೆಸಿದೆ? ನನ್ನ ರಸದಿಂದ ತಾನೇ ನಿಮಗೆ ಜ್ಞಾನ, ಮಿಕ್ಕವರಿಗೆ ಅಜ್ಞಾನ? ನಿಮ್ಮ ಜ್ಞಾನವೇ ಲೇಸೋ ಅವರ ಅಜ್ಞಾನವೇ ಲೇಸೋ ಯಾರು ಹೇಳಬಲ್ಲರು? ಎರಡೂ ಒಂದೇ ನಾಣ್ಯದ ಎರಡು ಮುಖಗಳು, ತಲೆ ನೀವು, ತಳ ಅವರು, ನಿಮ್ಮಿಬ್ಬರ ವಿಷಯದಲ್ಲಿ ಟಂಕಸಾಲಿಗ ನಾನು, ನನ್ನ ವಿಷಯದಲ್ಲಿ ನೀನು ಗೌರವದಿಂದಿರಬೇಕು" ಎಂದು ಹೇಳುತ್ತಾ, ತನ್ನನ್ನು ಮತ್ತು ಕವಿಯನ್ನು ಹೋಲಿಸುತ್ತಾ ಹೋಗುತ್ತದೆ. ಒಬ್ಬ ಸಾಹಿತಿಯೂ ಜನರಿಗೆ ಏನನ್ನು ನೀಡಬೇಕೆಂದು ಪ್ರಯತ್ನ ಪಡುತ್ತಾರೆಯೋ, ಈಚಲು ಸಹ ಜನಗಳಿಗೆ ನೀಡುವುದು ಅವನ್ನೆ ಎನ್ನುತ್ತದೆ. "ನಿಮ್ಮ ಜೀವ ಮೂರು ಸ್ಥಾಯಿಗಳಲ್ಲಿ ನಡೆಯುತ್ತಿದೆ, ನಿದ್ರಾ, ಸ್ವಪ್ನ, ಜಾಗೃತಿ. ಈ ಮೂರನ್ನು ಒಟ್ಟಿಗೆ ಒಂದೇ ಕಾಲದಲ್ಲಿ ಹೊಂದಿಸಿ ಅನುಭವಿಸಬೇಕೆಂದೇ ನಿಮ್ಮ ಜಾತಿಯ ಸತತ ಪ್ರಯತ್ನ ನಿನ್ನಂದವರ ಪ್ರಯತ್ನ ಜಾಗ್ರದವಸ್ಥೆಯಲ್ಲಿ ಸ್ವಪ್ನಾವಸ್ಥೆಯನ್ನು ಕಂಡುಕೊಳ್ಳುವುದರಲ್ಲಿ ಮುಗಿಯುತ್ತದೆ. ಅದು ಹಾಲು, ಇದು ನೊರೆ, ರಸಿಕರಿಗೆ ಇಂಥ ನೊರೆ ಹಾಲು ಹೃದ್ಯ. ನಿದ್ರೆ ಕರುವುದರಲ್ಲೂ ನೀನು ಗಟ್ಟಿಗ – ಇರಲಿ – ಅಂತೂ ನೀನು ಯತ್ನಶಾಲಿ, ಆದರೆ ನನ್ನಷ್ಟು ಕುಶಲನಲ್ಲ. ನನ್ನ ರಸ ಸಂಸರ್ಗದಿಂದ ಎಲ್ಲರ ಚೈತನ್ಯಕ್ಕೂ ಜಾಗ್ರದವಸ್ಥೆಯಲ್ಲಿಯೇ ಸ್ವಪ್ನಾವಸ್ಥೆ

[1] ಈಚಲು ಮರದ ಕೆಳಗೆ, ಪು: 50-51

ನಿಸ್ಸಂಶಯವಾಗಿ ಪ್ರಾಪ್ತವಾಗುತ್ತದೆ. ಅದು ನಿದ್ರಾಂತವೂ ಆಗುತ್ತದೆ. ನಿನ್ನ ಕಸಬೂ ನನ್ನ ಕಸಬೂ ಒಂದೇ, ಏಕೆ, ನಿನಗಿಂತ ನಾನು ಹೆಚ್ಚು ಕುಶಲ. ಆದರೆ ನಿಮ್ಮ ಸಮಾಜದಲ್ಲಿ ನಿನಗಿಂತ ನನಗೆ ಹೆಚ್ಚು ತಿರಸ್ಕಾರ. ಏಕೋ ಕಾಣೆ, ಇದರಿಂದ ನನಗೇನೂ ವಿಷಾದವಿಲ್ಲ[1] ಎನ್ನುತ್ತದೆ.

ಎಲ್ಲಿಂದೆಲ್ಲಿಗೆ ಹೋಲಿಕೆ, ಕವಿ ಎಲ್ಲಿ? ಈಚಲು ಎಲ್ಲಿ? ಆದರೆ ಪು.ತಿ.ನ ರಿಗೆ ಮೊದಲು ಈ ಹೋಲಿಕೆ ಸಿಟ್ಟನ್ನು ತರಿಸಿದರೂ ನಂತರ ಸರಿ ಎನಿಸುತ್ತದೆ. ಏಕೆಂದರೆ ಜಾಗ್ರದವಸ್ಥೆಯಲ್ಲಿ ಸ್ವಪ್ನವನ್ನು ತಂದು ನೆಲೆಗೊಳಿಸುವುದೇ ಕವಿಗಳ ಕಾರ್ಯ, ಜೀವನದ ಮೂರರಲ್ಲಿ ಸಮಗ್ರದೃಷ್ಟಿ ಸಿಕ್ಕುತ್ತದೆ. ಸುರೆಯ ಗುರಿಯೂ ಇದೇ ತಾನೆ. ಮದ್ಯವನ್ನು ಕುಡಿದವರೂ ಕಾಣುವುದು ಸ್ವಪ್ನವನ್ನೆ ತಾನೇ, ಹೀಗಾಗಿ ಈಚಲು ಹೇಳಿದುದರಲ್ಲಿ ಸತ್ಯವಿದೆ ಅನಿಸುತ್ತದೆ.

ಈ ಪ್ರಸಂಗವನ್ನು ಪರಂಪರೆ ಮತ್ತು ಆಧುನಿಕತೆ ಅದನ್ನು ತನ್ನದೇ ಆದ ರೀತಿಯಲ್ಲಿ ನೀಡುತ್ತಿದೆ ಎನ್ನುವುದನ್ನು ಗಮನಿಸಬಹುದು.

ಹೀಗೆ ಈಚಲು ತನ್ನ ಬಗೆಗ ಮನನ ಮಾಡುತ್ತಾ ಹೇಳುತ್ತದಂತೆ "ನಾನು ಅನೇಕರಿಗೆ ಮನೇದೇವರು, ನೀನು ವ್ರಾತ್ಯ, ನಿನಗೆ ಗೊತ್ತಿಲ್ಲದಿರಬಹುದು, ನನಗೂ ಪೂಜೆ ಪುರಸ್ಕಾರಗಳುಂಟು ನೀನರಿತಿರುವಷ್ಟು ನಿಕೃಷ್ಟನಲ್ಲ ನಾನು, ನನಗೂ ನಿನಗೂ ಎಷ್ಟು ಬಗೆಯಲ್ಲಿ ಸಾಮರಸ್ಯವಿದೆ. ನಿನ್ನಂತೆ ನಾನು ಸ್ವಪ್ನಪ್ರಚೋದಕ, ಸತ್ಯಪ್ರಿಯ, ಆದರೆ ನಿನ್ನ 'ಮಡಿ' ಭಾವ ನನಗಿಲ್ಲ. ನಾನು ನಿನ್ನಷ್ಟು ಅಸಹಾಯಕನೂ ಅಲ್ಲ, ನನಗಿಷ್ಟ ಬಂದ ಕಡೆ ನಾನು ಹೋಗುತ್ತೇನೆ. ನೆಲೆಸುತ್ತೇನೆ. ಸಿಕ್ಕಿದ ಜಾಗದಲ್ಲಿ ಬೆಳೆಯುತ್ತೇನೆ. ನಾನು ಯೋಗಿಯಂತೆ ಸ್ವತಂತ್ರ. ನಾನು ಸತ್ತರೆ ಅತ್ತವರೂ ಇಲ್ಲ, ಆದರೆ ನಾನೇನು ಪರೋಪಜೀವಿಯೆ? ನಿರ್ಭಯ ಹಾಗೂ ಉಪಕಾರಿ[2]



ಇಲ್ಲಿನ ಈ ಮಾತುಗಳು ಈಚಲಿನ ರೂಪದಲ್ಲಿ ಆಧುನಿಕ ಸಂಸ್ಕೃತಿ ಹೇಗೆ ಬೇರುಬಿಟ್ಟು ಆಳವಾಗಿ ಬೆಳೆಯುತ್ತಿದೆ ಎಂಬುದನ್ನು ತೋರಿಸುತ್ತಾ, ಈ ಸಂಸ್ಕೃತಿಯಿಂದ ಆಗುವ ಅನುಕೂಲತೆಗಳನ್ನು ಬಣ್ಣಿಸುತ್ತಾರೆ. ನಾವು ಮೊದಲೇ ಚರ್ಚಿಸಿದಂತೆ ಯಾವ ಸಂಸ್ಕೃತಿಯೂ ಕೆಟ್ಟದ್ದನ್ನು ನೀಡುವುದಿಲ್ಲ, ಅವರವರ ಸಂಸ್ಕೃತಿ ಅವರವರ ಭಾವಕ್ಕೆ ಸರಿಯಾಗಿಯೇ ಇರುತ್ತದೆ. ಆಧುನಿಕ ಸಂಸ್ಕೃತಿ ಕೆಲವು ಸಲ ನಮಗೆ ಮೇರೆ ಮೀರಿದ್ದು ಅನಿಸಿದರೆ, ಅದನ್ನು ನಾವು ಪರಂಪರೆಯಿಂದ ಪಡೆದಿಲ್ಲ ಎನ್ನುವ ಅರ್ಥವನ್ನು ಕೊಡುತ್ತದೆ. ಇಲ್ಲಿ ಪು.ತಿ.ನ ರು ಚಿಂತನೆ ನಡೆಸುವುದು ಈಗಾಗಲೇ ನಮಗೆ ಪರಂಪರೆಯಿಂದ ಬಂದಿರುವ ಸಂಸ್ಕೃತಿಯ ಜೊತೆಗೆ ಆಧುನಿಕತೆಯ ಸ್ವರೂಪವನ್ನು ಮಿಲನಗೊಳಿಸಿ ಬಾಳುವಂತಹ ನೀತಿಯನ್ನು, ಪಂಪರೆಗೆ ಅತಿ ಮಹತ್ವಕ್ಕೊಟ್ಟು, ಆಧುನಿಕತೆಯನ್ನು ನಿಕೃಷ್ಟವನ್ನಾಗಿ ನೋಡಬೇಕಿಲ್ಲ. ಹಾಗೆಯೇ ಪರಂಪರೆಯನ್ನು ನಿಕೃಷ್ಟಮಾಡಿ, ಆಧುನಿಕತೆಗೆ ಮಹತ್ವವನ್ನು ನೀಡಬೇಕಾಗಿಲ್ಲ, ಎರಡರಲ್ಲೂ ಇರುವ ಒಳ್ಳೆಯ ಅಂಶಗಳೇ ನಮ್ಮ ಮುಂದಿನ ಜೀವನದ ಸ್ವರೂಪ ಎನ್ನುವುದೇ 'ಈಚಲು ಮರದ ಕೆಳಗೆ' ಪ್ರಬಂಧದ ದರ್ಶನವೆನಿಸುತ್ತದೆ.

---

[1] ಅದೇ ಪುಟ:52

[2] ಪು: 54 ಅದೇ

ರಾಮಾನುಜರು ಹೇಳಿಕೊಟ್ಟ ಸಮಾಜದ ಎಲ್ಲ ವರ್ಗದ ಜನರಿಗೂ ಸಮಾನವಾದ ಗೌರವ ದೊರೆಯ ಬೇಕು ಎಂಬ ತತ್ತ್ವ 'ಈಚಲು ಮರವನ್ನು ಕುರಿತು ಪು.ತಿ.ನ ಅವರು ತಾಳುವ ನಿಲುವಿನಲ್ಲಿ ಸಾಂಕೇತಿಕವಾಗಿ ಅರ್ಥಪೂರ್ಣವಾಗಿ ವ್ಯಕ್ತವಾಗುತ್ತದೆ. ತೆಂಗಿನ ಮರದ ಜೊತೆಗಿನ ಹೋಲಿಕೆಗಳು ಸಾಂಸ್ಕೃತಿಕ ವಲಯದಲ್ಲಿರುವ ಅಸಮಾನತೆಯ ಬಗೆಗಿನ ಪು.ತಿ.ನ ಅವರ ವಿರೋಧವನ್ನು ಸೂಚಿಸುತ್ತದೆ.

ಒಂದು ಧರ್ಮದ ತತ್ತ್ವ, ಅಲ್ಲಿನ ಆಚರಣೆ, ಪರಿಸರ, ಒಂದು ಜೀವನ ಸಿದ್ಧಾಂತಗಳ ಮೇಲೆ ಎಂತಹ ಪರಿಣಾಮಗಳನ್ನು ಬೀರಬಹುದು ಎಂದು ನಾವು ಪು.ತಿ.ನ ರವರ ಅನೇಕ ಪ್ರಬಂಧಗಳಿಂದ ಅವಲೋಕಿಸಬಹುದು. ಇಲ್ಲಿ ಕೆಲವು ಪ್ರಬಂಧಗಳ ಮೂಲಕ ಮಾತ್ರ ಸ್ಪಷ್ಟಪಡಿಸುವಂತಹ ಪ್ರಯತ್ನ ಮಾಡಿದ್ದೇನೆ. ವಿಶಿಷ್ಟಾದ್ವೈತ ಭಕ್ತಿಯೋಗ ಮತ್ತು ಜ್ಞಾನಯೋಗ ಎನ್ನುವ ಎರಡು ಬಗೆಯಿಂದ ಜೀವನದ ಮುಕ್ತಿ ಮಾರ್ಗವನ್ನು ಚರ್ಚಿಸುತ್ತದೆ. ಆ ಎರಡು ಒಂದು ಬದುಕಿನ ಸಿದ್ಧಾಂತವಾಗಿ ಪಾವನ ಮಾಡುವಂತಹ ಲೌಕಿಕ ಸೊಬಗು ಒಂದು ಅಲೌಕಿಕತೆಯ ದರ್ಶನವನ್ನು ನೀಡುತ್ತವೆ. ಇಂತಹ ದರ್ಶನಗಳ ಬಿಂದು ರೂಪವೇ ಪು.ತಿ.ನ ರವರ ಸಾಧನೆ ಎನ್ನಬಹುದು.

ಈ ಪ್ರಬಂಧಗಳು ಪ್ರಾಚೀನ ಪರಂಪರೆ ಮತ್ತು ಆಧುನಿಕ ಪರಂಪರೆಗಳ ಎರಡು ದೃಷ್ಟಿಕೋನಗಳ ಸಂಯೋಗವನ್ನು ಹೊಂದಿದೆ. ಆಧುನಿಕ ಕಾಲದಲ್ಲಿ ನಿಂತು ಪ್ರಾಚೀನ ಸಂಸ್ಕಾರವನ್ನು ಪು.ತಿ.ನ ರವರು ನೀಡುತ್ತಿದ್ದಾರೆ, ಆಧುನಿಕ ಮನಸ್ಥಿತಿಗೆ ಇಂತಹ ಪ್ರಬಂಧಗಳು ಸಮಕಾಲೀನವಲ್ಲ ಎಂದೆನಿಸಬಹುದು, ಆದರೆ ಈಗಿನ ಯಾಂತ್ರಿಕ ಬದುಕಿನ ಕಡೆಗೆ ಸಾಗುತ್ತಿರುವ ನಮ್ಮ ಜೀವನಕ್ಕೆ ಒಂದು ಭದ್ರವಾದ ಮಾನಸಿಕ ನೆಮ್ಮದಿ ಬೇಕು. ಇಂತಹ ಮಾನಸಿಕ ನೆಮ್ಮದಿ, ದೈಹಿಕ ಆರೋಗ್ಯ ಎರಡೂ ನಮ್ಮ ಆಧುನಿಕ ಬದುಕು ನೀಡುವುದಿಲ್ಲ. ಇಂತಹ ಬದುಕನ್ನು ಮೀರಿದ ಸತ್ಯವೊಂದು ಈ ಲೋಕದಲ್ಲಿದೆ ಇದೇ ಮನುಷ್ಯನಿಗೆ ಮೂಲಭೂತವಾದ ಶಾಂತಿಯನ್ನು ನೀಡುತ್ತದೆ. ಇದು ನಮ್ಮ ಸಂಸ್ಕೃತಿಯ ಪರಂಪರೆಯಿಂದ ನಾವು ಪಡೆಯಬೇಕೆಂಬುದೇ ಈ ಪ್ರಬಂಧಗಳು ನಮಗೆ ನೀಡುವ ದರ್ಶನ. ಇಂತಹ ಪು.ತಿ.ನ ಸಾಂಸ್ಕೃತಿಕ ದರ್ಶನದ ಪರಮ ಭಾಗವತ ಮನೋಭೂಮಿಕೆಯ ಕವಿ ಮಾತ್ರವಲ್ಲ ಒಬ್ಬ ಮಾನವೀಯ ಕವಿ ಸಹೃದಯ ಎಂದು ಹೇಳಬಹುದು.

## ಮಲೆ - ದೇಗುಲದ ಯೋಗನರಸಿಂಹ



## ತಿರುನಾರಾಯಣಸ್ವಾಮಿ ಹಾಗೂ ಯದುಗಿರಿ ನಾಯಕಿ ಅಮ್ಮನವರು



## ಮೇಲುಕೋಟೆ ಮತ್ತು ಪು.ತಿ.ನ

ಪು.ತಿ.ನ ರವರ ಹೆಸರನ್ನು ಸ್ಮರಣೆ ಮಾಡಿಕೊಳ್ಳುತ್ತಿದ್ದ ಹಾಗೆ ಅವರ ಜೊತೆಗೂಡಿಯೇ ನೆನಪಾಗುವುದು ಮೇಲುಕೋಟೆ. ಈ ಸ್ಥಳಕ್ಕೂ ಪು.ತಿ.ನರಿಗೂ ಅವಿನಾಭಾವ ಸಂಬಂಧ. ಪು.ತಿ.ನ ರ ಸಂಪೂರ್ಣ ವ್ಯಕ್ತಿತ್ವದ ಚೈತನ್ಯಕ್ಕೆ ಬೆಳಕು ಈ ಮೇಲುಕೋಟೆ. ಈ ಪ್ರಸಿದ್ಧ ಊರು, ಇಲ್ಲಿನ ಮರ-ಗಿಡ – ಬಳ್ಳಿ, ಇಲ್ಲಿನ ದೇವಾಲಯಗಳು, ಇಲ್ಲಿನ ಕೆರೆ-ಕುಂಟೆಗಳು, ಬೆಟ್ಟ – ಗುಡ್ಡಗಳು ಎಲ್ಲವೂ ಇವರಿಗೆ ಪ್ರಿಯವಾದ ತಾಣಗಳೇ. ಮೈಸೂರಿನಲ್ಲಿ ಓದುತ್ತಿದ್ದಾಗ ರಜ ಬಂತೆಂದರೆ ಮೇಲುಕೋಟೆಗೆ ಬಂದು ಕಾಲವನ್ನು ಕಳೆಯುತ್ತಿದ್ದರಂತೆ. ಅಂತಹ ಒಂದು ಸ್ನೇಹಭಾವ ಈ ಸ್ಥಳದೊಡನೆ.

ಮೇಲುಕೋಟೆ ಮಂಡ್ಯ ಜಿಲ್ಲೆಯಲ್ಲಿರುವ ಒಂದು ಪ್ರಸಿದ್ಧ ಶ್ರೀವೈಷ್ಣವ ಕ್ಷೇತ್ರ. ಇದು ಬಹಳ ಪುರಾತನವಾದದ್ದಾದರೂ ರಾಮಾನುಜರು ನೆಲೆಸಿದ ನಂತರ ಪ್ರಸಿದ್ಧಿಯನ್ನು ಪಡೆಯಿತು. ರಾಮಾನುಜಾಚಾರ್ಯರು ಶ್ರೀವೈಷ್ಣವರ ನಾಲ್ಕು ಪವಿತ್ರ ಕ್ಷೇತ್ರಗಳಲ್ಲಿ ಈ ಕ್ಷೇತ್ರವೂ ಒಂದೆಂದು ಹೇಳುತ್ತಾ ನಿತ್ಯಸ್ಮರಣೆಯ, ದೈವಾನುಗ್ರಹದ ಸ್ಥಳವೆಂದು ಹೇಳುತ್ತಾರೆ. ಈ ಕ್ಷೇತ್ರದ ಮಹಿಮೆಯನ್ನು ಈ ರೀತಿ ಕೊಂಡಾಡುತ್ತಾರೆ.

ಶ್ರೀರಂಗ ಮಂಗಳಮಣಿಂ ಕರುಣಾನಿವಾಸಂ
ಶ್ರೀವೆಂಕಟಾದ್ರಿಶಿಖರಾಲಯ ಕಾಳಮೇಘಂ
ಶ್ರೀಹಸ್ತ ಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲ ದೀಪಂ

ಎನ್ನುತ್ತಾರೆ. ಶ್ರೀರಂಗ, ತಿರುಪತಿ, ಕಂಚಿ ಮತ್ತು ಯದುಗಿರಿ ಕ್ಷೇತ್ರಗಳನ್ನು ಈ ನಾಲ್ಕು ಕ್ಷೇತ್ರಗಳನ್ನು ಪವಿತ್ರ ಶ್ರೀವೈಷ್ಣವ ಕ್ಷೇತ್ರಗಳೆಂದು ಹೇಳುತ್ತಾರೆ.

ಇದನ್ನು ದಕ್ಷಿಣದ ಬದರಿಕಾಶ್ರಮ ಎಂದು ಜನ ಸಾಮಾನ್ಯರು ಬಣ್ಣಿಸುತ್ತಾರೆ. ಕರ್ನಾಟಕದಿಂದ ಬದರೀಯಾತ್ರೆ ಮಾಡ ಬಯಸುವ ಜನ ಈ ಯಾತ್ರೆಯನ್ನು ಮುಗಿಸಿ ಮೇಲುಕೋಟೆಗೆ ಭೇಟಿ ನೀಡಿಯೇ ತಮ್ಮ ಮನೆಗಳಿಗೆ ಹಿಂತಿರುಗುವ ಪದ್ಧತಿಯನ್ನು ಬೆಳೆಸಿಕೊಂಡಿದ್ದಾರೆ. ಏಕೆಂದರೆ ಅಲ್ಲಿ ಬದರೀನಾಥನ ದರ್ಶನ ಮಾಡಿದರೆ ಇಲ್ಲಿ ದಕ್ಷಿಣ ಬದರಿಯ ನಾರಾಯಣನ ದರ್ಶನ ಮಾಡಬೇಕು. ಆಗಲೇ ಬದರಿಯಾತ್ರೆಯ ಪುಣ್ಯಫಲ ಸಿಗುವುದು ಎಂಬ ಒಂದು ಗಾಢವಾದ ನಂಬಿಕೆ ಇದೆ.

ಮೇಲುಕೋಟೆ ಎಂಬುದು ಇತ್ತೀಚಿನ ಹೆಸರು. ಪೂರ್ವದಲ್ಲಿ ದತ್ತಾತ್ರೇಯರು ಈ ಪರ್ವತದಲ್ಲಿ ವೇದಗಳನ್ನು ಪ್ರವಚನ ಮಾಡಿದ್ದರಿಂದ ಇದಕ್ಕೆ "ವೇದ ಪರ್ವತ" ವೆಂಬ ಹೆಸರಿದ್ದು, ನಂತರ ನಾರಾಯಣನ ಸಂಪರ್ಕ ಉಂಟಾದ್ದರಿಂದ "ನಾರಾಯಣಾದ್ರಿ" ಎಂದು ಹೆಸರು ಪಡೆದು, ಮುಂದೆ ದ್ವಾಪರಯುಗದಲ್ಲಿ ಯಾದವರು ಈ ಸ್ವಾಮಿಯನ್ನು ಪೂಜಿಸಿದ್ದರಿಂದ "ಯಾದವಗಿರಿ"ಯಾಗಿ, ಮುಂದೆ ಯತಿರಾಜರೆನಿಸಿಕೊಂಡ ರಾಮನುಜರು ಇಲ್ಲಿ ನೆಲೆಸಿ ಜೀರ್ಣೋದ್ಧಾರ ಮಾಡಿದ್ದರಿಂದ ಯತಿಶೈಲವೆಂದು ಹೆಸರನ್ನು ಪಡೆಯಿತೆಂಬ ಐತಿಹಾಸಗಳಿವೆ[1] ಇದಲ್ಲದೆ ಈ ಕ್ಷೇತ್ರಕ್ಕೆ "ಯದುಗಿರಿ" "ತಿರುನಾರಾಯಣಪುರ", "ವೈಕುಂಠವರ್ಧನ" ಮುಂತಾದ ಹೆಸರುಗಳಿರುವುದು ಈ ಕ್ಷೇತ್ರದ ಪ್ರಸಿದ್ಧಿಯನ್ನು ತೋರುತ್ತದೆ.

ಈ ನಾಮದ ಐತಿಹಾಸಿಕಗಳನ್ನು ಗಮನಿಸಿದಾಗ ಮೇಲುಕೋಟೆ ಬಹಳ ಪ್ರಾಚೀನ ಕಾಲದಿಂದಲೂ ಇದ್ದಿತೆನ್ನುವ ಅರಿವಾಗುತ್ತದೆ. ಮುಂದೆ ಚೋಳರಾಜನ ಹಿಂಸೆಗಾಗಿ ಕಾಂಚೀಪುರವನ್ನು ಬಿಟ್ಟು ಕರ್ನಾಟಕದ ಈ ಸ್ಥಳದಲ್ಲಿ ಸುಮಾರು ಹನ್ನೆರಡು ವರ್ಷ ಶ್ರೀ ರಾಮಾನುಜಚಾರ್ಯರು ನೆಲೆಸಿದ್ದರಿಂದ ಈ ಕ್ಷೇತ್ರ ಶ್ರೀ ವೈಷ್ಣವರ ಪವಿತ್ರ ಕ್ಷೇತ್ರವಾಗಿ ಹೆಸರು ಪಡೆದುದನ್ನು ಗಮನಿಸಬಹುದು. ಶಿಥಿಲವಾಗಿದ್ದ ದೇವಾಲಯವನ್ನು ವಿಷ್ಣುವರ್ಧನನ ಸಹಾಯದಿಂದ ರಾಮಾನುಜರು ಊರ್ಜಿತಗೊಳಿಸಿದರು ಎನ್ನುವ ಮಾತಿದೆ. ಹಾಗೆಯೇ ಎಲ್ಲೋ ಹುತ್ತದಲ್ಲಿ ಅಡಗಿದ್ದ ನಾರಾಯಣ ಮೂರ್ತಿಯನ್ನು ಹೊರತೆಗೆದು ದೇವಾಲಯದಲ್ಲಿ ಪ್ರತಿಷ್ಠಾಪಿಸಿ, ದೆಹಲಿಯ ಬಾದಷಹನ ಬಳಿಯಿದ್ದ ಉತ್ಸವ ಮೂರ್ತಿ ಚೆಲುನಾರಾಯಣನನ್ನು ತಂದು ಪ್ರತಿಷ್ಠಾಪಿಸಿದರು ಎಂದೂ ಹೇಳುತ್ತಾರೆ.

ಮುಂದೆ ನಾನಾ ರಾಜವಂಶದವರು ಈ ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಹೊಯ್ಸಳರ ವಿಷ್ಣುವರ್ಧನ ದೇವಸ್ಥಾನವನ್ನು ಊರ್ಜಿತಗೊಳಿಸಿದ ನಂತರ, ವಿಜಯನಗರದ ಸಾಮಂತ ತಿಮ್ಮಣ್ಣನಾಯಕ, ಮೈಸೂರಿನ ಒಡೆಯರಾದ ಚಿಕ್ಕದೇವರಾಜರು, ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದು ಐತಿಹಾಸಿಕವಾಗಿ ಮಹತ್ವದ ವಿಚಾರ.

ಈ ಕ್ಷೇತ್ರ ನಾನಾ ದೇವಾಲಯಗಳನ್ನೂ ನಾನಾ ಆಚರಣೆಗಳನ್ನೂ ನಾನಾ ಉತ್ಸವಗಳನ್ನೂ ಒಳಗೊಂಡು ಪ್ರತಿದಿನ ವೈದಿಕ ಆಚರಣೆಯಿಂದ ಬೆಳಗುವ ಕ್ಷೇತ್ರ. ಇಂದಿಗೂ ನಾವು ಈ ಕ್ಷೇತ್ರದಲ್ಲಿ ಗಮನಿಸುವುದು ಪ್ರಾಚೀನ ಪರಂಪರೆಯ ಸತ್ವಗಳನ್ನು. ಇಂದಿಗೂ ಇಲ್ಲಿಯ ವಿದ್ಯಾಭ್ಯಾಸ ವೇದ, ಆಗಮ,

---

[1] ನನ್ನ ಶ್ರೀವೈಷ್ಣವ ಕೈಂಕರ್ಯ : ಜಿ.ಪಿ.ರಾಜರತ್ನಂ ಪ್ರ: ಹೆಬ್ಬಾರ್ ಶ್ರೀವೈಷ್ಣವ ಸಭಾ

ಪ್ರಬಂಧ, ಮುಂತಾದ ಪ್ರಾಚೀನ ವೈದಿಕ ಮಾದರಿಯಲ್ಲೇ ನಡೆಯುತ್ತದೆ. ಇಲ್ಲಿನ ಹಲವಾರು ಸಂಸ್ಕೃತ ಶಾಲೆಗಳು ಈ ವೇದಾಧ್ಯಯನವನ್ನು ಕಲಿಸಿಕೊಡುತ್ತವೆ. ಹಾಗೆಯೇ ಗಂಡು ಮಕ್ಕಳು ಕುಡುಮಿ (ಜಟ್ಟು)ಯನ್ನು ಬಿಟ್ಟು, ಪಂಚೆಯುಟ್ಟು ಕಲಿಯುವಂತಹ ಸಂಪ್ರದಾಯವನ್ನು ಕಾಣುತ್ತೇವೆ. ಹಾಗೆಯೇ ಹೆಂಗಸರು ಕಚ್ಚೆಸೀರೆಯನ್ನುಟ್ಟು, ಹಣೆಗೆ ತಿಲಕವನ್ನಿಡುವಂತಹ ವಾತಾವರಣ ಇಲ್ಲಿ ಕಾಣಬಹುದು. ಇದೆಲ್ಲದರ ಪ್ರಸ್ತಾಪಕ್ಕೆ ಕಾರಣ ಕಾಲ ಎಷ್ಟೇ ಆಧುನಿಕಗೊಂಡರೂ, ಒಂದು ಸಾಂಸ್ಕೃತಿಕ ಜೀವನ ಯಾನವನ್ನು ಇಲ್ಲಿ ನಾವು ಕಾಣಬಹುದು. ಪ್ರಾಚೀನ ಜೀವನ ಪದ್ಧತಿಗಳು ಮರೆಯಾಗದೇ ಇನ್ನು ಜೀವಂತವಾಗಿ ನೆಲೆನಿಂತಿರುವುದು ಈ ಕ್ಷೇತ್ರದ ಒಂದು ವಿಶೇಷತೆ ಎನ್ನಬಹುದು.

ಇಂತಹ ಪವಿತ್ರ ಕ್ಷೇತ್ರದಲ್ಲಿ, ಪವಿತ್ರ ಉತ್ಸವದ ದಿನ ಅಂದರೆ ಮೇಲುಕೋಟೆಯ ಪ್ರಸಿದ್ಧ ಉತ್ಸವವಾದ ವೈರಮುಡಿಯ ದಿವಸ (17.03.1905) ಪು.ತಿ.ನ ರವರು ಜನ್ಮತಾಳಿದರು. ಇವರು ಹುಟ್ಟಿದ್ದು ತಮ್ಮ ತಾಯಿಯ ಊರಾದ ಗೊರೂರಿನಲ್ಲಿ. ಬಾಲ್ಯ ಕಳೆದದ್ದು ಈ ಸ್ಥಳದಲ್ಲಿ, ಇವರ ಜನ್ಮದ ಬಗ್ಗೆ ಪು.ತಿ.ನ ರಿಗೆ ಹೆಮ್ಮೆಯಿದೆ.

ದೈವವಶಾತ್ ಒಂದು ದೊಡ್ಡ ಉತ್ಸವದ ದಿನ ನಾನಿಲ್ಲಿ ಜನಿಸಿದೆ. ದೈವದ ಒಂದು ಗಾಢವೂ ಆನಂದ ಸಂಮೃದ್ಧವೂ ಆದ ಭಾವ ಮೊದಲ ಉಸಿರನಲ್ಲಿಯೇ, ಆ ದಿನ ನನ್ನನ್ನು ಹೊಕ್ಕು ನನ್ನ ಇಡೀ ಬದುಕನ್ನು ವ್ಯಾಪಿಸಿತು. ಬೆಟ್ಟ, ಕಣಿವೆಗಳು, ಕೆರೆ, ತೊರೆ, ಪುಷ್ಕರಿಣಿ, ದೇಗುಲಗಳ ಬಹು ಸುಂದರವಾದ ಊರು ಮೇಲುಕೋಟೆ. ಅಲ್ಲಿನ ಪಾಠಶಾಲೆಯಲ್ಲಿ ಕಾವ್ಯರಸವನ್ನೂ, ಗುಡಿಯಲ್ಲಿ ಆರ್ಯದ್ರಾವಿಡ ದ್ವೈತ ಭಾವಗಳ ರಸವನ್ನೂ, ಪುರಾಣ ಹಾಗೂ ಕಾಲಕ್ಷೇಪ ಸಂದೇಶಗಳಲ್ಲಿ ಕಥಾರಸ ಪ್ರವಚನ ರಸಗಳನ್ನೂ, ದೇವೋತ್ಸವಗಳಲ್ಲಿ ಗಾನ ಮತ್ತು ಇತರ ಕಲಾರಸಗಳನ್ನೂ ಮಾಧ್ಯಮಿಕ ಕನ್ನಡ ಶಾಲೆಯಲ್ಲಿ ಕನ್ನಡದ ಗದ್ಯ ಪದ್ಯಗಳ ರುಚಿಯನ್ನೂ ನಾನು ಪಡೆದುಕೊಂಡೆ. ನನ್ನ ಪ್ರಪಂಚದ ರಸವತ್ತಾದ ಭಾಗ ನನಗೆ ಮೇಲುಕೋಟೆಯ ಕೊಡಿಗೆ.[1]

ಪು.ತಿ.ನ ರವರೇ ತಮ್ಮ ಮೇಲೆ ಆಗಿರುವ ಮೇಲುಕೋಟೆಯ ಗಾಢ ಪ್ರಭಾವವನ್ನು ಹೇಳಿಕೊಳ್ಳುತ್ತಾರೆ. ಆ ಪ್ರಭಾವವೇ ಅವರ ಸಾಹಿತ್ಯದ ಕಥಾವಸ್ತುಗಳು ಎನ್ನುತ್ತಾರೆ. ಅಲ್ಲಿನ ಪ್ರತಿಯೊಂದು ಅಂಶವು ಅವರ ಪಾಲಿನ ರಸದೌತಣ. ಯದುಗಿರಿಯ ಚಿತ್ರಣದಲ್ಲೆಲ್ಲಾ ಪು.ತಿ.ನ ರ ಬರಹ ಕಲ್ಲುಸಕ್ಕರೆಯ ಹಾಗೆ ಬಾಯಲ್ಲಿ ನೀರೂರಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದೆ. ಅವರ ಕೆಲವು ಬರಹಗಳು ಉತ್ತಮ ಸಂಸ್ಕೃತಿಯನ್ನು ಬಿಂಬಿಸುತ್ತಾ ಸಂಸ್ಕೃತಿಯ ವಾಹಕನಂತೆ ಕೆಲಸಮಾಡುತ್ತದೆ. ಕೆಲವು ಕೃತಿಗಳು ಓದುಗನಿಗೆ ದೈವಿಭಾವನೆಲೆಯನ್ನು ಉಂಟುಮಾಡುತ್ತಾ, ಅವರೇ ಆಚಾರ್ಯ ಪುರುಷರಂತೆ ಕಾಣುವುದಕ್ಕೆ ಪ್ರೇರೆಪಿತವಾಗುತ್ತದೆ. ಇಂತಹ ಸಂಸ್ಕೃತಿಯ ಚಿತ್ರಣ ಯಾವುದೇ ವ್ಯಕ್ತಿಯಲ್ಲಿ ಮೂಡಬೇಕಾದರೂ ಬಾಲ್ಯದ ವಾತಾವರಣವು ಸಾಕಷ್ಟು ಕೆಲಸಮಾಡುತ್ತಿರುತ್ತದೆ. ಇಂತಹ ಕೆಲಸವನ್ನು

---

[1] ಮೆಲುಕು : ಪು.ತಿ.ನ ಪು: 10 ಸಮಗ್ರ ಕವನಗಳು ಪ್ರ- ಲಿಪಿ 1988

ಯದುಗಿರಿ ಮಾಡುತ್ತಿದೆ. ಪು.ತಿ.ನರವರಲ್ಲೂ ಈ ಸಂಸ್ಕೃತಿ ಐಕ್ಯವಾಗುವುದರ ಮೂಲಕ ಸಾರಸ್ವತ ಲೋಕಕ್ಕೆ ಅಪಾರ ಕೊಡುಗೆ ನೀಡಿದೆ ಎನ್ನಬಹುದು.

ಬಾಲ್ಯದ ವಾತಾವರಣ ಪ್ರತಿಯೊಬ್ಬ ಮನುಷ್ಯನಲ್ಲಿ ಪ್ರಭಾವವನ್ನು ಬೀರುತ್ತದೆ. ಆ ಬಾಲ್ಯದಲ್ಲಿ ನಡೆದಂತಹ ಪ್ರತಿಯೊಂದು ಸನ್ನಿವೇಶವೂ ಮುಂದಿನ ಅವನ ವ್ಯಕ್ತಿತ್ವಕ್ಕೆ ಮಾದರಿಯಾಗುತ್ತದೆ. ಅಲ್ಲಿ ಕಲಿತದ್ದೆಲ್ಲ ಚಿರಸ್ಥಾಯಿಯಾಗಿ ಉಳಿಯುತ್ತದೆ. ಆದ್ದರಿಂದಲೇ ಮಾನವನ ಜೀವನದಲ್ಲಿ ಬಾಲ್ಯದ ಪರಿಸರ ಪ್ರಮುಖ ಪಾತ್ರವನ್ನು ವಹಿಸುತ್ತಾ ಹೋಗುತ್ತದೆ. ಪು.ತಿ.ನರಿಗೂ ಸಹ ಅವರ ಬಾಲ್ಯ, ಬಾಲ್ಯವನ್ನು ಹಸಿರಾಗಿಸುವ ಮೇಲುಕೋಟೆ ಜೀವನ ಸಂಮೃದ್ಧಿಯ ವೃಕ್ಷಗಳಾಗಿವೆ. ಆ ವೃಕ್ಷವು ನೀಡಿದ ಆತ್ಮಾನಂದಾ ಅವರ ವ್ಯಕ್ತಿತ್ವ ವಿಕಸನದ ಮಾದರಿಯಾಗಿದೆ.

ಪು.ತಿ.ನ ರವರು ತಮ್ಮ ಬಾಲ್ಯಜೀವನವನ್ನು ನೆನೆಸುವಾಗ ತಮ್ಮ ಗೆಳೆಯ ಖಾದ್ರಿ ಶಾಮಣ್ಣನವರನ್ನೂ ನೆನೆದು ಈ ರೀತಿ ಹೇಳುತ್ತಾರೆ ಆಗಿನ ಕಾಲದಲ್ಲಿ ಮೇಲುಕೋಟೆಯಲ್ಲಿ ಐದು ಗರಡಿಮನೆಗಳಿದ್ದವು, ಗಾಣಿಗಗೇರಿ ಗರಡಿಮನೆಯಲ್ಲಿ ನಾವಿಬ್ಬರೂ ಸ್ವಲ್ಪಕಾಲ ಸಾಧನೆ ಮಾಡಿ ಕೆಮ್ಮಣ್ಣು ಮಟ್ಟಿಯಲ್ಲಿ ಉರುಳಾಡಿದ್ದು ಜ್ಞಾಪಕ ಇದೆ. ನನಗೆ ದಳವಾಯಿ ಕೆರೆಯಲ್ಲಿ ಈಜುವುದು ಉಲ್ಲಾಸದ ಆಟವಾಗಿತ್ತು, ಅಲ್ಲದೇ ಮಿಡಲ್ ಸ್ಕೂಲಿನಲ್ಲಿ ಪುಟ್‌ಬಾಲ್‌ಗೆ ತುಂಬಾ ಪ್ರೋತ್ಸಾಹ ಸಿಗುತ್ತಿತ್ತು, ಚಿಮಾಚು (ಶಾಮಣ್ಣ) full back ಆಗಿದ್ದರೆ ನಾನು Half Back ಆಗಿದ್ದೆ, ಆಗ ಚೆಂಡನ್ನು ತಡೆಯುವುದರಲ್ಲಿ ನನ್ನ ಎಡಗೈಗೆ ಬಿದ್ದ ಪೆಟ್ಟನಿಂದ ಆದ ಕೈನ ಡೊಂಕು. ಈಗಲೂ ಆ ಪ್ರಸಂಗವನ್ನು ನನಗೆ ನೆನಪಿಸುತ್ತದೆ[1]

ಹೀಗೆ ಅವರ ಬಾಲ್ಯದ ಜೊತೆಗೆ ನೆಂಟನ್ನು ಬೆಳೆಸಿರುವ ಯದುಗಿರಿಯನ್ನು ಪು.ತಿ.ನ ತಮ್ಮ ಅನೇಕ ಕಾವ್ಯಗಳ ನಾಯಕನನ್ನಾಗಿ ಮಾಡಿಕೊಂಡು ಚಿತ್ರಿಸುತ್ತಾರೆ. ಅದರಲ್ಲಿ 'ಯದುಗಿರಿಯ ಮೌನವಿಕಾಸ' ಮತ್ತು 'ಯದುಗಿರಿ' ಬಹಳ ಮುಖ್ಯವಾದ ಕವನಗಳು. ಯದುಗಿರಿಯ ಮಲೆಯ ಮೇಲಿರುವ ಯೋಗಾ ನರಸಿಂಹನ ಪರಮ ಭಕ್ತ ಪು.ತಿ.ನ. ಅವರ ಬದುಕಿನ ಬಹಳ ಪ್ರಿಯವಾದ ಸ್ಥಳ ಆ ಬೆಟ್ಟ ಆ ಬೆಟ್ಟದ ಮೇಲೆ ಕುಳಿತೇ ತಾವು ಜ್ಞಾನವನ್ನು ಪಡೆದ ಪ್ರಸಂಗಗಳನ್ನು ವಿವರಿಸುತ್ತಾರೆ.

ರಜಾದಿನಗಳಲ್ಲಿ ನಾನು ಮೇಲುಕೋಟೆಗೆ ಓಡಿಬಿಡುತ್ತಿದ್ದೆ, ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ಒಂದು ರಜಾದಿನದಲ್ಲಿ ನಾನು ಮೇಲುಕೋಟೆಗೆ ಬಂದು ಮಲೆದೇಗುಲದ ಒಂದು ಏಕಾಂತ ಸ್ಥಳದಲ್ಲಿ ನಿರ್ಜನವಾಗಿರುವ ವೇಳೆ ಮೆಕಾಲೆ ಪ್ರಣೀತವಾದ ಲಾರ್ಡ್‌ಕ್ಲೈವ್‌ನ ಜೀವನ ಚರಿತ್ರೆ ಓದಿದುದು ಜ್ಞಾಪಕ. ಎಂಥ ವಿಚಿತ್ರವೂ ಸಾಂಕೇತಿವೂ ಆದ ಪ್ರಸಂಗ, ಒಬ್ಬ ನಮ್ಮ ದೇಶದ ಸ್ವಾತಂತ್ರ್ಯ ಹರಣ ಮಾಡಿ ಸಾಮ್ರಾಜ್ಯ ಕಟ್ಟಿದವನು, ಮತ್ತೊಬ್ಬ ನಮ್ಮನ್ನು ಸಾಂಸ್ಕೃತಿಕದಾಸ್ಯಕ್ಕೆ ದೂಡಲು ಹವಣಿಸಿ ಕೃತಾರ್ಥನಾಗುತ್ತಿರುವವನು, ನಮ್ಮ ಸಂಸ್ಕೃತಿ ಸಾರವತ್ತಾದ ಕೇಂದ್ರವಾದ ಮಲೆಗುಡಿಯಲ್ಲಿ ಇವರ ಅಧ್ಯಯನ. ನನ್ನಿಂದ ಇಂತಹ ಓದು ತನ್ನ ಕೊರತೆಗಳನ್ನು ನೀಗಿಸಿ ಪೋಷಣೆಯನ್ನು ಕೊಟ್ಟಿದ್ದನ್ನು ಅಭಿಮಾನ ಪೂರ್ವಕವಾಗಿ ನೆನೆಯುತ್ತಾರೆ.[2]

---

[1] ಖಾದ್ರಿ ಶಾಮಣ್ಣ : ಲೇ. ಪು.ತಿ.ನ ಗ್ರ. ಸಂ.ಗ. ಸಂಪುಟ ಪು. 762

[2] ಸಮಗ್ರ ಕವನಗಳ ಮುನ್ನುಡಿಯಿಂದ

ಯದುಗಿರಿ ಪ್ರಕೃತಿಯ ರಮ್ಯತಾಣ, 'ಯದುಗಿರಿ' ಕವನದಲ್ಲಿ ಕವಿಯ ಕಣ್ಣಿಗೆ ಇದು ಹೀಗೆ ಕಾಣುತ್ತದೆ.

ರವಿ ಮುಳುಗುವಂತಹ ಸಂಜೆಯ ಸಮಯದಲ್ಲಿ ಯದುಗಿರಿ ಸೌಂದರ್ಯದ ಗೂಡು. ಆ ವಾತಾವರಣ ಚಿನ್ನದ ನೀಲ ಬಣ್ಣದಿಂದ ಆವರಿಸಿ, ಹಕ್ಕಿಗಳ ಚಿಲಿಪಿಲಿ ನಾದದಿಂದ ಕೂಡಿದರೆ ನೋಡುಗನ ಕಣ್ಣಿಗೆ ತಂಪನ್ನು ನೀಡುತ್ತದೆ. ಕತ್ತಲು ಆವರಿಸಿದಂತೆ ಇಡೀ ಮಲೆಯು ಸೌಂದರ್ಯಾನುಭೂತಿಯಲ್ಲಿ ಸಿಲುಕುತ್ತದೆ.

ಖುಷಿ ಮಂಡಲ ಮೃಗಶಿರಗಳು
ಗುಡಿ ಗೋಪುರ ಮುಟ್ಟಿ
ನರಸಿಂಹನ ಶಿರಮುಕುಟಕೆ
ಮಣಿಹಾರವ ಕಟ್ಟಿ,
ತಮ್ಮೊಲುಮೆಯ ಕಾಣಿಕೆಯನು
ಸಲ್ಲಿಸುತ್ತಿವೆ ಸ್ತುತಿಸಿ
ಗುಡಿಕಳಸವ ಶಶಿಯಡರಲು
ಹರಜೂಟವ ಸ್ಮರಿಸಿ [1]

'ಮಲೆ ದೇಗುಲ'ಕ್ಕೆ ವಾತಾವರಣವೇ ಒಂದು ದೈವಿಕ ನೆಲೆಗಟ್ಟನ್ನು ಕಲ್ಪಿಸಿಕೊಟ್ಟಂತೆ ಕವಿ ಚಿತ್ರಿಸಿರುವ ಈ ಕಲ್ಪನೆ ಅದ್ಭುತವಾದುದು. ಒಂದು ದೈವೀಭೂತವಾದ ಸ್ಥಳ ತನ್ನ ವಾತಾವರಣದಿಂದಲೇ ಹೇಗೆ ಅದ್ಭುತ ಕ್ರಿಯೆಯನ್ನು ಉಂಟುಮಾಡುತ್ತದೆ. ಇಂತಹ ದೈವ ಭಾವನೆ ಉಂಟು ಮಾಡುವ ಈ ವಾತಾವರಣದಿಂದ ಯದುಗಿರಿಗೆ ಎಂತಹ ಸೌಂದರ್ಯ ಸಿದ್ಧಿಯಾಗುತ್ತದೆಂದರೆ,

ಏನ್ ಶಾಂತಿಯು, ಸೌಂದರ್ಯವು
ಯಾದವಗಿರಿ ನಭದಿ
ಏನ್ ಮೌನವು, ನೀರವತೆಯು
ಮಲೆ ತುದಿದೇಗುಲದಿ
ಈ ಶಾಂತಿಯೊಳಾಲಿಸದೋ
ಉಡುಲೋಕದ ಗಾನ
ಸಮಶ್ರುತಿಲಯ ಹೊಂದಿರುವೀ
ತನುಮುಚ್ಚಿಹ ಗಾನ[2].

---

[1] ಯದುಗಿರಿ, ಪು: 10 ಗ್ರ: ಪು.ಸ.ಕ

ವಾತಾವರಣದಲ್ಲಿ ಹೊಂದಿರುವ ಈ ವಿಲಕ್ಷಣ ಮೌನದಲ್ಲಿ ಯದುಗಿರಿ, ಮಲೆದೇಗುಲ ಶಾಂತಿಯ ತವರಾಗಿದೆ, ಇಂತಹ ಆಧ್ಯಾತ್ಮಿಕ ಶಾಂತಿ ಅನೇಕ ತಪಸ್ಸುಗಳನ್ನು ಮಾಡಿದರೂ ದೊರಕದಂಥಹ ಶಾಂತಿ. ಯದುಗಿರಿಯ ಮೌನದ ಮೂಲಕ ದೊರೆಯುತ್ತದೆ. ಈ ಶಾಂತಿ ಲಭ್ಯವಾದಾಗ ವ್ಯಾವಹಾರಿಕ ಪ್ರಪಂಚದ ಲೋಭ – ಮೋಹಗಳು ಕಣ್ಣಿಗೆ ಕಾಣಿಸದೆ ಕುರುಡಾಗುತ್ತವೆ. ಈ ಪ್ರಪಂಚದ ಗಾನವನ್ನು ಮರೆಸುವಂತಹ ಶಕ್ತಿಯನ್ನೂ ಯದುಗಿರಿಯ ಮಲೆ-ದೇಗುಲವು ಹೊಂದಿದೆ. ಯದುಗಿರಿಯು ಮನುಷ್ಯನಿಗೆ ನೀಡುವಂತಹ ಸತ್ವವನ್ನು ಈ ಕವಿತೆ ನಿರೂಪಿಸುತ್ತದೆ.

ಈ ಮಲೆಯ ಸೌಂದರ್ಯವನ್ನು 'ಬೆಟ್ಟದ ಮೇಲೆ' ಎಂಬ ಪ್ರಬಂಧದಲ್ಲಿ ಮತ್ತಷ್ಟು ಗಾಢವಾಗಿ ವಿವರಿಸುತ್ತಾರೆ.

ನಗಾರಿಯ ಮೊಳಗು ನಮಗೆ ಮಾತಾಡುವುದಕ್ಕೆ ಅವಕಾಶ ಕೊಡಲಿಲ್ಲ, ಅದರ ಮಂದ್ರ ಮಧುರ ಧ್ವನಿ ನಮ್ಮ ಸುತ್ತಲಿನ ಸವಿಸ್ತೃತ ಮೌನದ ಗಾಂಭೀರ್ಯವನ್ನು ಬಹುಪ್ರಶಸ್ತವಾಗಿ ಮನಸ್ಸಿಗೆ ತರುತ್ತಿತ್ತು, ಈ ಗಿರಿಯ ಔನ್ನತ್ಯ, ಈ ಬಾನಿನ ಹರವು ಇವುಗಳ ಹದವನ್ನು ಬಣ್ಣಿಸುವಂತಿತ್ತು, ಆ ದುಂದುಭಿ ಧ್ವನಿಯ ತಾನ, ಇರುಳ ಕಣಿವೆ ತುಂಬಿ ಬಾನಿಗೆ ತುಳುಕಿತ್ತು, ಕಣಿವೆಯ ಆಳದಿಂದಲೋ, ಬಾನಿನ ವೈಶಾಲ್ಯದಿಂದಲೋ ಏನೋ ಮೇಲಿನ ನಕ್ಷತ್ರಗಳು ಊರಿಗಿಂತ ಇಲ್ಲಿ ನಮಗೆ ಬಹಳ ದೂರಕ್ಕೆ ಸರಿದಂತೆ ತೋರುತ್ತಿದ್ದವು. ಈ ಕತ್ತಲನ್ನು ತುಂಬುವ ಸನ್ನಾಹದಲ್ಲಿವೆಯೋ ಎಂಬಂತೆ ಆಕಾಶದ ತುಂಬ ಗಿಲಗಿಲನೆ ಅವು ಹೊಳೆಯುತಿತ್ತು ಈ ನಗಾರಿಯ ಸದ್ದು, ಈ ತಾರೆಗಳ ನಡುವೆ ಕತ್ತಲೆ ಕಾವೇರಿಯಂತೆ ಹರಿಯುತ್ತಿತ್ತು, ತಂಗಾಳಿ ಆ ನದಿಯ ಕಿರುದೆರೆಗಳಂತೆ ತಮ್ಮ ಮೈಮೇಲೆ ಹರಿದು ಹೋಗುತ್ತಿತ್ತು, ನಮ್ಮ ಮಲೆಯ ಗೋಪುರ ಈ ನಿಶಾ ಶರಾವತಿಯ ಪ್ರಪಾತದ ಬಂಡೆಯಂತೆ ನಮಗೆ ತೋರುತ್ತಿತ್ತು, ಈ ಪಾತದ ಬೃಹದ್ ಘೋಷದಂತೆ ನಗಾರಿಯ ನಾದ ನಮಗೆ ಭಾಸವಾಗುತ್ತಿತ್ತು, ಗೃಹ ಸ್ವಾಮಿನಿ ಜೇಡನ ಬಲೆಗಳನ್ನು ಗುಡಿಸಿ ಹೊರಹಾಕುವಂತೆ, ನಮ್ಮ ಮನಸ್ಸಿನ ಮೂಲೆಗಳಲ್ಲಿದ್ದ ತುಚ್ಛ ಕಾಮಗಳನ್ನೆಲ್ಲಾ ಗುಡಿಸಿಹಾಕುತ್ತಿತ್ತು, ಪೂರ್ವದಿಗಂತದಲ್ಲಿ ಕಾಡುಗಿಚ್ಚಿನ ಸ್ವರ್ಣಪ್ರಭೆಯಂತೆ ಮೊದಲು ತುಸು ಚೆಂಬೆಳಕು ತೋರಿ ಕೊನೆಗೆ ಕುಂಕುಮ ವರ್ಣದ ಚಂದ್ರಬಿಂಬವೇ ಮೂಡುತ್ತಿದೆ! ಎಲ್ಲರೂ ಅದಕ್ಕಾಗಿ ಈ ಪ್ರಾದುರ್ಭಾವವನ್ನು ನೋಡುತ್ತೇವೆ. ಶೂನ್ಯತುಟಿ ತೆರೆದು ಓಂ ಎಂದಂತೆ ಶಶಿಬಿಂಬ ತೋರಿತು. ಓಂ ಎಂದ ಕ್ಷಣ ಸೃಷ್ಟಿ ಸ್ಪಷ್ಟವಾದಂತೆ ಜಗತ್ತು ದೃಶ್ಯವಾಯಿತು.[2]

ಕನ್ನಡ ಸರಸ್ವತಿಯ ಶಬ್ದಭಂಡಾರದ ಪದಗಳು ಸಂಸ್ಕೃತ ಪದಗಳೊಡನೆ ಮಿಲನಗೊಂಡು ಸೃಷ್ಟಿಯೊಡನೆ ಲಾಸ್ಯವಾಡುವಂತಹ ಭಾಷೆಯ ಬಳಕೆಯನ್ನು ಪು.ತಿ.ನ ರ ಇಂತಹ ಬರವಣಿಗೆಯಲ್ಲಿ ಕಾಣುತ್ತೇವೆ. ಓದುಗನ ಮನಸ್ಸಿಗೆ ಸೃಷ್ಟಿಯ ರಹಸ್ಯವನ್ನು ಬಯಲಿಗಿಡುವಂತಹ, ಆ ರಸೋತ್ಪನ್ನವನ್ನು ಓದುಗನು ಅನುಭವಿಸುವಂತಹ ಶಕ್ತಿ ಇಂತಹ ಬರವಣಿಗೆಗಳಿಗೆ ಇರುವುದು. ಈ ಇಡೀ ಭಾಗ ಹೇಳುವುದು ಯದುಗಿರಿ ಬರಿಯ ಒಂದು ಪುಣ್ಯಕ್ಷೇತ್ರವಲ್ಲ ಇದು ಮನೋಮಂದಿರದಲ್ಲಿ ನೆಲೆಗೊಂಡಿರುವ ಸೃಷ್ಟಿಕ್ಷೇತ್ರ. ಈ ಸೃಷ್ಟಿಕ್ಷೇತ್ರವೇ ಮನುಷ್ಯನ ಆತ್ಮಶಕ್ತಿಯ ಭದ್ರಕೋಟೆ, ಇದೇ ಅವನ ಮೋಕ್ಷಕ್ಷೇತ್ರ, ಹೀಗೆ

---

[1] ಅದೇ ಪು:11

[2] ಯದುಗಿರಿಯಲ್ಲಿ ಗೆಳೆಯರು : ಸ.ಗ.ಸಂಪುಟ, ಪು.243-244

ಯದುಗಿರಿ ಪು.ತಿ.ನರ ಜನ್ಮಸ್ಥಳವೂ ಹೌದು ಅರಿವಿನ ಸ್ಥಳವೂ ಹೌದು, ಕವಿತಾ ರಚನೆಗೆ, ಪ್ರಬಂಧ ರಚನೆಗೆ ಸ್ಫೂರ್ತಿಯ ಕೇಂದ್ರವೂ ಹೌದು, ಮೋಕ್ಷ ಸ್ಥಳವೂ ಹೌದು.

ಈ ಮೋಕ್ಷವನ್ನು ನೀಡುವಂತಹ ಯದುಗಿರಿಯ ಕಲ್ಪನೆ 'ಯದುಗಿರಿಯ ಮೌನವಿಕಾಸ' ಎನ್ನುವ ಕವನದಲ್ಲಿ ಮತ್ತಷ್ಟು ಅದ್ಭುತವಾಗಿ ಮೂಡುತ್ತದೆ. ಯದುಗಿರಿಯ ಈ ಮೌನ ಮೂಡಣ ಕಣಿವೆಯ ಮೌನ, ಪಡುವಣ ಕಣಿವೆಯ ಮೌನ, ಹಾಗೂ ಯದುಗಿರಿಯ ದೇಗುಲದ ಮುಂಜಾನೆಯ ಮೌನವೆಂಬ ಮೂರು ಪದರಗಳಿಂದ ಗೋಚರವಾಗುತ್ತಾ ಹೋಗುತ್ತದೆ. ಮೂಡಣದಲ್ಲಿ ಆಗ ತಾನೇ ಬೆಳಗುವ ಸೂರ್ಯ ಸುತ್ತಲಿನ ಪರಿಸರಕ್ಕೆ ಜೀವಂತಿಕೆಯನ್ನು ಕೊಡುತ್ತಾ ಸಾಗುತ್ತಾನೆ. ನೀರವ ಮೌನದಲ್ಲಿ ಮಲಗಿದ್ದ ಪರಿಸರ ಬೆಳಕಿನ ಸ್ಪರ್ಶಕ್ಕೆ ಎಚ್ಚರಪಡೆಯುತ್ತದೆ. ಇಡೀ ಪ್ರಕೃತಿಯೇ ರವಿಕಿರಣದ ಪ್ರಭೆಯಿಂದ ನಲಿಯುವಾಗ, ಹಕ್ಕಿಗಳು ಸಂತಸ ಪಡುವಾಗ, ಮಾನವನು ಅಜಾಗೃತ ಸ್ಥಿತಿಯಿಂದ ಜಾಗೃತ ಸ್ಥಿತಿಗೆ ಬಂದು ವ್ಯಾವಹಾರಿಕ ಜಗತ್ತಿಗೆ ಕಾಲಿಡುತ್ತಾನೆ. ಹಾಗಾದರೆ ಮೂಡಣದ ಮೌನದ ಭಾವ ಸ್ಥಿತಿ? ಇದಕ್ಕೆ ಕವಿಯ ಉತ್ತರ.

ಮೂಡಣ ಕಣಿವೆಯ ತಳದೊಳಗಾಲಿಸು
ಎಚ್ಚೆತ್ತಿದೆ ಮೌನ!
ಸಾಸಿರದನಿಯೊಳು ಚಿಗುರಿಗೆ ಮೌನ
ಸುಮ್ಮಾನದಿ ನುಡಿದೆತ್ತಿದೆ ಮೌನ
ಸುಂದರವೀ ಮೌನ
ಸವಿ ಮೌನ![1]

ಮೂಡಣದಲ್ಲಿ ಇಂತಹ ಮೌನವಿದ್ದರೆ ಪಡುವಣದ ಕಣಿವೆಯಲ್ಲಿ ಬರುವಂತಹ ಮೌನ ಎಂತಹುದು. ಈ ಪಡುವಣದ ಕಣಿವೆಯ ನೀರವ ಮೌನವನ್ನು ಹಗಲಿನ ಮೌನವು ಕೆಣಕಲು ಸಾಧ್ಯವಾಗುತ್ತಿಲ್ಲ. ಇಲ್ಲಿರುವುದು ಕರಿಕಲ್ಲುಗುಡ್ಡಗಳು. ಈ ಬೆಳಕು ಎಲ್ಲಾ ಕಡೆ ಹಸುಳೆಯ ಧ್ವನಿಯಂತೆ, ಹಕ್ಕಿಗಳ ಇಂಚರವನ್ನು ಮಾತ್ರ ಕೇಳಲು ಸಾಧ್ಯವಾಗುವಂತೆ ಮಾಡುತ್ತಿದೆ. ಈ ಪಡುವಣ ಕಣಿವೆ ಹಗಲಿನಲ್ಲಿ ಹೇಗೆ ನಿಂತಿದೆಯೆಂದರೆ ಕವಿಯ ಕಣ್ಣಿಗೆ ಯೋಗಿಯ ರೀತಿಯಲ್ಲಿ ಕಾಣುತ್ತಿದೆ.

"ಬಸಿರೊಳು ವಿಲಯವ ಹುದುಗಿಸಿ ನಿಂತಿರು
ವಂತಿದೆ ಗಿರಿದಮದೋಚೆಯೊಳು?
ಬೆಚ್ಚನೆ ಬಿಸಿಲಿನ ಪುಷ್ಪಸ್ಪರ್ಶಕು?
ಪ್ರಚಲಿತವಾಗದ ಯೋಗದೊಳು.

ಈ ಯೋಗಿಯ ರೀತಿಯಲ್ಲಿ ನಿಂತಿರುವ ಪಡುವಣದ ಮೌನ?

[1] ಯದುಗಿರಿಯ ಮೌನವಿಕಾಸ, ಪು : 70, ಗ್ರ: ಸ.ಕವನಗಳು

ಪಡುವಣ ಕಣಿವೆಯ ಆಳದೊಳಾಲಿಸು
ನಿದ್ರಿಸುತಿದೆ ಮೌನ!
ಹೊಂಬಿಸಿಲೆಚ್ಚರಗೊಳಿಸದ ಮೌನ
ರಾಗ ಮೋದಗಳು ಕಲಕದ ಮೌನ
ಸೋಜಿಗವೀ ಮೌನ!
ಘನ ಮೌನ![1]

ಪಡುವಣದ ಮೌನ ನೀರವ ಮೌನ, ಎಂತಹ ರಾಗ – ಮೋಹಗಳಿಗೂ ಬಗ್ಗದ ಮೌನ, ಘನವಾದ ನೋಡುಗರಿಗೆ ಅಚ್ಚರಿಯನ್ನು ಕೊಡುವ ಮೌನ. ಹಾಗಾದರೆ ಯದುಗಿರಿಯ ದೇಗುಲದ ಮುಂಜಾನೆಯ ಮೌನ ಯಾವುದು? ಮುಂಜಾನೆಯ ಬೆಳಕು ಮೂಡುತ್ತಿದ್ದ ಹಾಗೆ, ದೇಗುಲದ ನಗಾರಿಯು ನಾದವು ಜಗತ್ತನ್ನು ಎಚ್ಚರಿಸುತ್ತಾ ಹೋಗುತ್ತದೆ.

ಆ ಸದ್ದಿನಿಂದ ಎಚ್ಚೆತ್ತ ಜನತೆ, ಹರಿಯ ಸಾನ್ನಿಧ್ಯದಲ್ಲಿ ನೆರೆಯುತ್ತಾ ಹೋಗುತ್ತಾರೆ. ಗುಡಿಯ ಕತ್ತಲೆ ಹಣತೆಗಳ ಬೆಳಕಿನಿಂದ ಆವರಿಸಿ ಸುಂದರ ನೋಟವೊಂದನ್ನು ನೀಡುತ್ತಿದೆ. ಸಹಸ್ರಕಂಠದ ಘೋಷಗಳು ಮಾನವನ ಹೃದಯಕ್ಕೆ ಆತ್ಮಾನಂದಾವನ್ನು ನೀಡುತ್ತಿದೆ. ಇದೆಲ್ಲದರ ನಡುವೆ ಮೌನವೊಂದು ಮೂಡಿ ದೇಗುಲ ಸ್ತಬ್ಧವಾಗಿದೆ. ಈ ಮೌನಕ್ಕೆ ಕಾರಣ ಕವಿ ತರ್ಕಿಸುತ್ತಾನೆ.

ಜೀವವು ಭಾವಕೆ ಸಂದಿತೆ?
ಕಾಯದ ಕರಣದ ಹಂಗನು ತೊರೆಯಿತೆ
ಆತ್ಮ? ಭಾವವು ಸವಿಸೊಲ್ಲ?

ಹೀಗೆ ಪ್ರಶ್ನಿಸುತ್ತಾ ಮನುಷ್ಯನ ಎಲ್ಲಾ ಭಾವಾವಿಷ್ಟವಾದ ಬದುಕು ದೇವನಿಗೆ ಅರ್ಪಿತವಾಯಿತೆ? ಅರ್ಪಿತವಾಗಿ ಸಾವು ನೋವನ್ನು ದಾಟಿ ಆತ್ಮದಲ್ಲಿದ್ದ ದ್ವಂದ್ವವು ನೊಂದು, ಸಾತ್ವಿಕವಾದ ಸುಸ್ಥಿರತೆಯೊಂದು ಈ ಮೌನದಲ್ಲಿ ಸಿಕ್ಕಿದೆ ಎಂಬುದನ್ನು ಕವಿ ಅದ್ಭುತವಾಗಿ ಚಿತ್ರಿಸುತ್ತಾನೆ.

ದೇಗುಲದೊಳು ಮುಂಜಾನೆಯೊಳಾಲಿಸು
ಚಿತ್ ಆಗಿದೆ ಮೌನ!
ಭಾವವ ಕಾಯುವನಾಂತಿಹ ಮೌನ!
ಮೋಕ್ಷಾನಂದದಿ ಜೀವನೌನ!
ಓ-ಕಡು ಸೋಜಿಗವೀ ಮೌನ
ಚಿನ್ಮಾನ![2]

ಇದಕ್ಕಿಂತ ಭಾವಾವೇಶವಾಗುವ ಮೌನ ಈ ಜಗತ್ತಿನಲ್ಲಿದೆಯೇ. ಪ್ರಪಂಚದಲೆಲ್ಲಾ ಮಾನವನು ಹೋರಾಡುವುದೇ ಇಂತಹ ಶಾಂತಿಗಾಗಿ. ಇದಕ್ಕಾಗಿ ಪಡಬಾರದ್ದನೆಲ್ಲಾ, ಮಾಡಬಾರದ್ದನ್ನೆಲ್ಲಾ ಮಾಡಿ

---

[1] ಅದೇ, ಪುಟ 71

[2] ಅದೇ, ಪುಟ 72

ಕೊನೆಗೂ ಶಾಂತಿ ಸಿಕ್ಕದೇ ಸಾಯುತ್ತಾನೆ. ಆದರೆ ಯದುಗಿರಿಯು ಮನುಷ್ಯನ ಮುಕ್ತಿಯ ಸಂಕೇತವಾಗಿ, ಮೋಕ್ಷದ ಆತ್ಮಾನಂದದ ರೂಪವಾಗಿ ನಿಂತಿದೆ ಎಂದು ಪು.ತಿ.ನ ಭಾವಿಸುತ್ತಾರೆ. ಈ ಆತ್ಮಾನಂದ ಸ್ವರೂಪವೇ ಪು.ತಿ.ನ ಯದುಗಿರಿಯಲ್ಲಿ ಬಾಲ್ಯದಿಂದ ಪಡೆದದ್ದು ಎನ್ನಬಹುದು.

ಈ ಯದುಗಿರಿಯ ಮತ್ತಷ್ಟು ವರ್ಣನೆಗಳನ್ನು "ಯದುಗಿರಿಯಲ್ಲಿ ಗೆಳೆಯರು" ಎಂಬ ಪ್ರಬಂಧಗಳಲ್ಲಿ ನೀಡುತ್ತಾರೆ. ಇಲ್ಲಿ ಒಂದು ನಾಟಕೀಯ ನಿರೂಪಣಾ ತಂತ್ರವನ್ನು ಬಳಸುತ್ತಾರೆ. ತಮ್ಮ ಗೆಳೆಯರನ್ನು ಯದುಗಿರಿಗೆ ಕರೆಸಿಕೊಂಡು ಅಲ್ಲಿನ ವಾತಾವರಣ ಸವಿಯನ್ನೆಲ್ಲಾ ಊಣಬಡಿಸುತ್ತಾರೆ. ಒಂದೊಂದು ಸ್ಥಳವನ್ನೂ ಪರಿಚಯ ಮಾಡಿಕೊಡುತ್ತಾರೆ. ತಮಗೆ ಇಷ್ಟವಾದ ಕೆರೆ, ದೇವಲಯ, ಬೆಟ್ಟ-ಗುಟ್ಟಗಳು ಇವನ್ನೆಲ್ಲಾ ಸಮೃದ್ಧವಾಗಿ ಪರಿಚಯಿಸುತ್ತಾರೆ. ಇದರಲ್ಲಿ "ಒಲೆಯಮುಂದೆ" ಪ್ರಬಂಧ ಬಹಳ ಗಮನ ಸೆಳೆಯುತ್ತದೆ. ತನ್ನ ಗೆಳೆಯರಿಗೆ ಅಭ್ಯಂಜನ ಸ್ನಾನ ಮಾಡಿಸುವುದಕ್ಕಾಗಿ ಪು.ತಿ.ನ ಮತ್ತು ಅವರ ಮನೆಯವರು ಸಿದ್ಧತೆಗೊಳಿಸುತ್ತಾರೆ. ಈ ಸಿದ್ಧತೆಗಾಗಿ ಒಲೆ ಮುಂದೆ ಕೂತು ನೀರನ್ನು ಕಾಯಿಸಲು ತೊಡುಗುತ್ತಾರೆ.

ಕೂರುತ್ತಾ ಉರಿಯುವ ಒಲೆಯ ಮುಂದಿರುವ ಸೊಬಗು, ಅದು ಕೊಡುವ ಆನಂದವನ್ನು ವಿವರಿಸುತ್ತಾರೆ. ಅಡುಗೆ ಮನೆಯ ಒಲೆಯ ಮುಂದೆ ಕೂತು ಅದಕ್ಕೆ ತೊಟ್ಟು ತುಪ್ಪವನ್ನು ಬಿಟ್ಟರೆ ಆ ತುಪ್ಪದಿಂದಾಗಿ ಉಂಟಾಗುವ ಕಂಪು, ಆ ಕಂಪು ನೀಡುವ ಉಜ್ವಲತೆಗಳನ್ನು ಸ್ಮರಿಸುತ್ತಾರೆ. ಆ ದಿನ ಅಭ್ಯಂಜನವಾಗುವುದು ಮಾಧವನಿಗೆ ಮಾತ್ರ. ಎಲ್ಲಾ ಗೆಳೆಯರೂ ಸೇರಿ ಅವನಿಗೆ ಅಭ್ಯಂಜನ ಮಾಡಿಸಿ ಆನಂದ ಪಡುತ್ತಾರೆ. ಈ ಆನಂದವನ್ನು ಹೀಗ ವರ್ಣಿಸುತ್ತಾರೆ. "ಒಟ್ಟನಲ್ಲಿ ಈ ಅಭ್ಯಂಜನ ಪ್ರಿಯನಿಗೆ ಅಭ್ಯಂಜನ ಪ್ರಿಯವಾಯಿತು. ನಿಷ್ಕ್ರಿಯತೆ ಕಾವ್ಯಮುಖೇನ ಸದನುಭೂತಿಗಳನ್ನು ಪಡೆದು ಪಡುವ ಆನಂದದಂತೆ ಈ ಸ್ನಾನಾನಂದ ನಮಗಾಯಿತು". ಈ ಮಾತು ಅವರ ಜೀವನಪ್ರಿಯತೆಯನ್ನು ಮನದಟ್ಟು ಮಾಡಿಕೊಡುತ್ತದೆ. ಇವರು ಯದುಗಿರಿಯಲ್ಲಿ ಪಡೆದ ಆನಂದ ಮತ್ತೆಲ್ಲಿ ಕಾಣಲು ಸಾಧ್ಯವಾಗಲಿಲ್ಲವೇನೊ ಎನ್ನಿಸುತ್ತದೆ.

ಮುಂದೆ ಕೆಲ್ಲೊಟ್ಟಿನ ಕಣಿವೆಯನ್ನು, ಅದರ ಸೌಂದರ್ಯವನ್ನು, 'ತೊರೆಯದಾರಿಯಲ್ಲಿ' ಪ್ರಬಂದದಲ್ಲಿ ವರ್ಣಿಸುತ್ತಾರೆ. ಇದು ಮೊದಲ ನೋಟಕ್ಕೆ ಬೆರಗು ತರುವಂತಹ ಕಣಿವೆ ಎನ್ನುತ್ತಾರೆ. ದೂರಕ್ಕೆ ಒಂದೇ ಮಲೆಯಂತೆ ಕಾಣುವ ಈ ಕಣಿವೆ ಹತ್ತಿರಕ್ಕೆ ಹೋದರೆ ಎರಡು ಹೋಳಾಗಿ, ಅದರ ಮಧ್ಯದಲ್ಲಿ ನೀರು ಹರಿಯುವುದಂತೆ ಈ ಜಾಗವೂ ಪು.ತಿ.ನ ರವರ ಧ್ಯಾನಕ್ಕೆ ತಕ್ಕ ಜಾಗ ಎನ್ನುತ್ತಾರೆ.

ಹೀಗೆ ಇಡೀ ಯದುಗಿರಿ ಪು.ತಿ.ನ ರವರ ರಸತಾಣ. ಯದುಗಿರಿಗೂ - ಪು.ತಿ.ನ ರಿಗೂ ಎಂತಹ ಸಂಬಂಧ? ಎಂದರೆ ಅದು ಕರುಳು ಬಳ್ಳಿಯ ಸಂಬಂಧ. ತಾಯಿ – ಮಗುವಿನ ಸಂಬಂಧ, ಸ್ನೇಹ-ಸ್ನೇಹಗಳ ಸಂಬಂಧ, ದೇವ – ಭಕ್ತನ ಸಂಬಂಧ, ಎಲ್ಲಕ್ಕೂ ಮೀರಿ ಪು.ತಿ.ನ ರ ಚೈತನ್ಯದ ಸ್ಫೂರ್ತಿಯ ಸಂಬಂಧ ಎನ್ನಬಹುದು.

## ಅ) ಮೇಲುಕೋಟೆಯ ದೇವಾಲಯಗಳು – ಅಲ್ಲಿನ ಆಚರಣೆಗಳು

ದೇವಾಲಯಗಳೇ ಮೇಲುಕೋಟೆಗೆ ಅಂತಃಸತ್ವ, ಅವುಗಳೇ ಇಲ್ಲಿ ಪಾರಂಪರಿಕ ಸಂಸ್ಕೃತಿಗೆ ಕಾರಣೀಭೂತವಾದವು. ಏಕೆಂದರೆ ಮೇಲುಕೋಟೆಯ ಇತಿಹಾಸದ ಪುಟವನ್ನು ತಿರುವಿಹಾಕಿದರೆ ಈ ದೇವಾಲಯವೇ ಮೊದಲು ಕಣ್ಣಿಗೆ ಬೀಳುವುದು. ಈ ಹಿಂದೆಯೇ ಪ್ರಸ್ತಾಪ ಮಾಡಿರುವಂತೆ ಬಹಳ ಪ್ರಾಚೀನವಾದ ಊರು ಈ ಮೇಲುಕೋಟೆ – ಶ್ರೀರಾಮಾನುಜರಿಂದ ಜಗತ್ಪ್ರಸಿದ್ಧವಾಯಿತು. ಹಾಳುಬಿದ್ದ ದೇಗುಲ ಪುನರ್ ನಿರ್ಮಾಣಗೊಂಡು ಶ್ರೀವೈಷ್ಣವರ ಪವಿತ್ರಕ್ಷೇತ್ರವಾಯಿತು. ರಾಮಾನುಜರಿಂದ ಊರ್ಜಿತಗೊಂಡ ಬಹಳ ಪ್ರಸಿದ್ಧ ದೇವಾಲಯ ತಿರುನಾರಾಯಣನ ದೇವಾಲಯ. ಇಲ್ಲಿನ ಮೂಲ ವಿಗ್ರಹ ದೇವರು ಮಣ್ಣಿನಲ್ಲಿ ಹೂತುಹೋಗಿದ್ದು ರಾಮಾನುಜರಿಗೆ ಕನಸಿನಲ್ಲಿ ದರ್ಶನ ನೀಡಿ, ಈ ಪವಿತ್ರಕ್ಷೇತ್ರದಲ್ಲಿ ನೆಲೆನಿಂತಿತು ಎನ್ನುವ ಇತಿಹಾಸವಿದೆ.

ಈ ದೇವಾಲಯದ ಉತ್ಸವ ಮೂರ್ತಿ ಚೆಲುವ ನಾರಾಯಣ. ಈ ಮೂರ್ತಿಯನ್ನು ಶ್ರೀರಾಮಚಂದ್ರನು ಪ್ರೀತಿಯಿಂದ ಆರಾಧನೆ ಮಾಡಿದ್ದ ಎನ್ನುತ್ತಾರೆ. ಇದಕ್ಕೆ 'ರಾಮಪ್ರಿಯ' ಎಂತಲೂ ಹೆಸರಿದೆ ತಿರುನಾರಾಯಣನ ಮೂಲವಿಗ್ರಹವೂ, ಚೆಲುವನಾರಾಯಣನ ಉತ್ಸವ ವಿಗ್ರಹವೂ, ಈ ದೇವರ ಕೈಂಕರ್ಯ ಮಾಡಿದ ರಾಮಾನುಜರ ವಿಗ್ರಹವೂ ನೆಲಸಿರುವ ದೇವಾಲಯದ ಮೇಲಿನ (ಗೋಪುರದ ಭಾಗವಾದ) ವಿಮಾನಕ್ಕೆ "ಆನಂದಮಯ ದಿವ್ಯ ವಿಮಾನ'ವೆಂದು ಹೆಸರು ಬಂದಿರುವುದನ್ನು ಕಾಣಬಹುದು. ಆ ನಾರಾಯಣ ದೇಗುಲದ ಸುತ್ತಾ ಪ್ರಾಂಗಣದಲ್ಲಿ ಆಳ್ವಾರುಗಳ, ಅಮ್ಮನವರ, ಆಂಜನೇಯರ, ಸನ್ನಿಧಿಗಳೂ ಇದೆ.

ಪು.ತಿ.ನ ರವರು 'ನಾರಾಯಣ ದೇಗುಲದಲ್ಲಿ' ಎಂಬ ಪ್ರಬಂಧದಲ್ಲಿ ಈ ದೇವಾಲಯದ ವಿಶೇಷವನ್ನು ಪ್ರಸ್ತಾಪಮಾಡುತ್ತಾರೆ. ಈ ಗುಡಿ ನಮ್ಮೂರಿಗೆ ಆತ್ಮದಂತಿದೆ ಎನ್ನಬಹುದು. ತನ್ನಸುತ್ತ ಮುತ್ತಲೂ ಎದ್ದು ಬಿದ್ದು ನರಳಿ ನಲಿದು ಹುಟ್ಟಿ ಸಾಗುವ ನಶ್ವರ ಸಂಸಾರದ ಶಾಶ್ವತ ಸತ್ವದಂತಿದೆ ಎಂದರೆ ಹೆಚ್ಚು ಹೇಳಿದಂತಾಗುವುದಿಲ್ಲ. ನಾನು ಹುಡುಗನಾಗಿದ್ದಾಗ ಇದನ್ನು ಸೃಷ್ಟಿಯ ಕೇಂದ್ರ ಸ್ಥಾನವೆಂದು ಭಾವಿಸಿಕೊಂಡಿದ್ದೆ. ಸಕಾಲ ಚರಾಚರ ಪ್ರಪಂಚದ ಸತ್ವವೆಲ್ಲ ಇದರಲ್ಲಿ ಅಡಗಿದೆ ಎಂದು ತಿಳಿದುಕೊಂಡಿದ್ದೆ.[1] ಎನ್ನುತ್ತಾರೆ, ಈ ನಾರಾಯಣನ ಗುಡಿ ಮೇಲುಕೋಟೆಯ ಆತ್ಮವೇ? ಎಂದರೆ ಅದು ಅಂದೂ ಹೌದು ಇಂದೂ ಹೌದು ಎನ್ನಬಹುದು.

ಈ ದೇವಾಲಯದಲ್ಲಿ ಕೆಲಸ ಮಾಡುವವರಿಗೆ ತಮ್ಮದೇ ಆದ ಪದವಿಗಳಿವೆ ಆ ಹಕ್ಕು ಓಲಗದವನಿಂದ ಹಿಡಿದು ಅರ್ಚಕನವರೆಗೂ ತನ್ನದೇ ಆದ ರೀತಿಯಲ್ಲಿ ಅನ್ವಯವಾಗುತ್ತದೆ. ಬಾಲಕ ಪು.ತಿ.ನರಿಗೆ ಇಂತಹ ಸೇವೆಗಳನ್ನು ಮಾಡುವ ಮಾನವರು ಈ ದೇಗುಲದಲ್ಲಿ ದಿವ್ಯ ವ್ಯಕ್ತಿಗಳಂತೆ ತೋರುತ್ತಿದ್ದರು. ಬಾಲಕನಾದ ತನಗೆ ಯಾವ ಸೇವೆಯು ಲಭ್ಯಇಲ್ಲದೇ ತಾನೊಬ್ಬನೇ ಈ ದೇವಾಲಯದ

---

[1] ನಾರಾಯಣ ಗುಡಿಯಲ್ಲಿ; ಗ್ರ : ಸ.ಗದ್ಯಸಂಪುಟ. ಪು.24

ಹೊರಗಿನವನು. ನಾನು ಅವನ ಕುಟುಂಬಕ್ಕೆ ಸೇರಿದವನಲ್ಲ ಅನಿಸುತ್ತದೆ. ಈ ಏಕಾಂಗಿತನವನ್ನು ಹೋಗಲಾಡಿಸಲು ತಾವು ಅದರಲ್ಲಿ ಏನಾದರೂ ಕೈಜೋಡಿಸಲು ಪ್ರಯತ್ನ ಪಡುತ್ತಿದ್ದರಂತೆ. ಒಮ್ಮೊಮ್ಮೆ ಏನಾದರೂ ಮಾಡಿ ಹೇಗಾದರೂ ಮಾಡಿ ಈ ಸಂಸಾರಕ್ಕೆ ಸೇರಿಕೊಳ್ಳಬೇಕೆಂದು ಪರ್ಯುತ್ಸಕನಾಗಿ, ನಂದಾದೀವಿಗೆಯ ಕುಡಿಯನ್ನು ಮಿಡಿದು ಬತ್ತಿಯನ್ನು ಮೀಟುತ್ತಿದ್ದೆ. ಗುಂಬಾರತಿಯವನು ಹತ್ತಿರದಿಲ್ಲದಿರುವ ಸಮಯವನ್ನು ನಿರೀಕ್ಷಿಸಿಕೊಂಡಿದ್ದು ಆ ಕೆಲಸವನ್ನು ನಾನು ಮಾಡುತ್ತಿದ್ದೆ.[1] ಆದರೆ ಈ ರೀತಿ ಮಾಡಲು ಎಷ್ಟು ದಿನ ಸಾಧ್ಯ. ಈ ರೀತಿಯ ಒಂಟಿತನದಿಂದ ಒಂದು ದಿನ ಖಿನ್ನರಾಗಿ ನಿಂತಿರುವ ಸಮಯದಲ್ಲಿ ಯಾರು ಸುಖದ ಸಂದೇಶವನ್ನು ನೀಡಿದಂತೆ ಅನ್ನಿಸಿತಂತೆ, ಆ ಸಂದೇಶ ಹೀಗಿದೆ.

"ಏನು ಹುಚ್ಚಿದು ನಿನ್ನದು, ನಾರಾಯಣನ ಸಂಸ್ಕಾರಕ್ಕೆ ನೀನು ಸೇರಿಲ್ಲವೆಂದು ನಿನಗೆ ಯಾರು ಹೇಳಿದರು? ಅವನ ಪ್ರೀತಿಯಿಂದ ಹೊರಗಾದವರೂ ಇಲ್ಲ; ಮಗು ಅದರಲ್ಲೂ ನಿನ್ನನ್ನು ಕಂಡರೆ ಅವನಿಗೆ ಬಲುಮೋಹ, ನಿನ್ನ ಕೈಂಕರ್ಯಕ್ಕೆ ಅವನು ಮೆಚ್ಚಿಕೊಂಡಿದ್ದಾನೆ. ಅದಕ್ಕೆ ಪ್ರತಿಯಾಗಿ ಅದು ನಿನ್ನೊಡಗೂಡಿ, ನಿನ್ನೊಡನಾಡಿ ನಿನಗೆ ಸ್ನೇಹಿತರಾಗಲು, ಈ ನಕ್ಷತ್ರ ವೃಂದವನ್ನೂ ಚಂದ್ರನನ್ನೂ ಕಳುಹಿಸಿದ್ದಾನೆ. ಅಷ್ಟು ಹೊತ್ತಿನಿಂದಲೂ ಅವರು ನಿನಗೆ ಸನ್ನೆ ಮಾಡುತ್ತಿದ್ದಾರೆ. ಆದರೂ ನೀನು ಆಕಡೆ ತಿರುಗಲೊಲ್ಲೆ[2] ಎಂದು ಹೇಳುವಂತೆ ತೋರುತ್ತದೆ. ಇಲ್ಲಿಂದ ಮುಂದೆ ಪು.ತಿ.ನ ಮತ್ತು ನಕ್ಷತ್ರದ ಆಟ ಪ್ರಾರಂಭವಾಗುತ್ತದೆ. ಪ್ರಾಕಾರದ ಸುತ್ತ ಇವರು ತಲೆಯೆತ್ತಿ ನೋಡುತ್ತಾರೆ. ಅಲ್ಲಿ ನಕ್ಷತ್ರಗಳು ಇವರಿಗಾಗಿ ಕಾದಿರುವಂತೆ ನಿಂತಿರುತ್ತದೆ. ಇದನ್ನು ಕಂಡ ಲೇಖಕ ಹೆಜ್ಜೆ ಮುಂದಿಡುತ್ತಾರೆ. ನಕ್ಷತ್ರವು ಹೆಜ್ಜೆ ಮುಂದಿಡುತ್ತದೆ. ಆಶ್ಚರ್ಯದಿಂದ ಪ್ರಾಕಾರದ ಸುತ್ತ ಓಡುತ್ತಾರೆ. ಅವು ಇವರ ಜೊತೆಯಲ್ಲಿಯೇ ಓಡುತ್ತವೆ, ಒಂದು ಸಲ ಓಡದೆ ಮೂರುಸಲ ಓಡುತ್ತಾರೆ. ಮೂರು ಸಲವೂ ಇವು ಓಡುತ್ತವೆ. ಇವರು ನಿಂತರೆ ಅವನು ನಿಲುತ್ತಾನೆ, ಅವರು ಓಡಿದರೆ ಅವು ಓಡುತ್ತವೆ. ಒಟ್ಟಿನಲ್ಲಿ ಅವು ಇವರನ್ನು ಅನುಸರಿಸಿ ನಡೆಯುವುದು ಆಗ ಇವರಿಗೆ ಅನಿಸುತ್ತದೆ ತಾನು ನಾರಾಯಣ ಬಳಗಕ್ಕೆ ಸೇರಿದವನೆಂದು, ಅಂದಿನಿಂದ ಅವುಗಳನ್ನು ಜೊತೆಮಾಡಿಕೊಂಡೆ ದೇವಾಲಯಕ್ಕೆ ಹೋಗುತ್ತಿದ್ದರಂತೆ. ಆಗ ಅವರಿಗೆ ಅನಿಸುತ್ತಿದ್ದ ಭಾವ ಅಲ್ಲಿ ಪ್ರಾಕಾರದ ಸುತ್ತ ಹೇಗೆ ಕುಣಿದಾಡುತ್ತಿದ್ದೆ, ಆಮೇಲೆ ನಾರಾಯಣ ಸ್ವಾಮಿಯ ಮುಂದುಗಡೆ ಎಷ್ಟು ವಿನಯದಿಂದ ನಿಲ್ಲುತ್ತಿದ್ದೆ ಪ್ರಪಂಚದಲ್ಲಿ ಆತನೊಬ್ಬನೇ ಸತ್ವಶಾಲಿಯೆಂದು, ಆತನಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದು ನಾನು ಹೇಗೆ ಭಾವಿಸಿಕೊಳ್ಳುತ್ತಿದ್ದೆ.[3] ಈ ಮಾತುಗಳೇ ಪು.ತಿ.ನರಿಗೆ ದೇವಾಲಯ ಸಂಸ್ಕೃತಿಯ ಬಗ್ಗೆ ಇದ್ದ ನಂಬಿಕೆ. ತಮ್ಮ ಎಲ್ಲಾ ಸುಖ ದುಃಖಗಳು ಎಲ್ಲವೂ ಇಲ್ಲಿಂದಲೇ ಪರಿಹಾರಕಂಡುಕೊಳ್ಳುವ ರೀತಿ. ನಕ್ಷತ್ರ ಮತ್ತು ಬಾಲಕನ ಓಟದ ನಡುವೆ ದೊಡ್ಡ ವೇದಾಂತವನ್ನು ಹೇಳುತ್ತಾ ಹೋಗುತ್ತಾರೆ. ನಾವು ಹೇಗೆ ಈ ಲೋಕವನ್ನು ಅನುಭವಿಸುತ್ತಾ ಹೋಗುತ್ತೇವೊ, ಆತ್ಮಾನಂದವೂ ಹಾಗೆ ನಮಗೆ ಸಹಕರಿಸುತ್ತಾ ಹೋಗುತ್ತದೆ. ಲೋಕವನ್ನು, ಈ ಮನುಷ್ಯ ಜನ್ಮವನ್ನೂ

---

[1] ನಾರಾಯಣ ಗುಡಿಯಲ್ಲಿ : ಸ.ಗದ್ಯ ಸಂಪುಟ. ಪು.25

[2] ನಾರಾಯಣ ಗುಡಿಯಲ್ಲಿ : ಸ.ಗದ್ಯ ಸಂಪುಟ. ಪು.25

[3] ಅದೇ, ಪುಟ 27

ಚಲಿಸುವಂತಹ ಶಕ್ತಿಶಾಲಿ ಆ ದೈವನೊಬ್ಬನೆ ಎನ್ನುವ ದೈವಿಕ ಭಾವನೆಯೆ ಪು.ತಿ.ನ ರ ಆಸ್ತಿ ಎನ್ನುವುದು ಇದರಿಂದ ತಿಳಿಯುತ್ತದೆ.

ಮನುಷ್ಯನ ಅಹಂಕಾರ ನಿರಸನಕ್ಕೆ ಎಡೆಯೊಂದು ಬೇಕು, ಇದಿಲ್ಲದೆ ಮನುಷ್ಯನಿಗೆ ಸುಖವಿಲ್ಲ ದೇವ ಮಂದಿರಗಳ ಆವಶ್ಯಕತೆ ಇಲ್ಲದೆ[1]. ದೇವಾಲಯದ ಕಲ್ಪನೆಯೇ ಎಂತಹ ಮಹತ್ತರ ಭಾವವೊಂದನ್ನು ಸ್ಮರಣೆಗೆಳು ಎಂಬುದನ್ನು ನಾವು ಈ ಮಾತುಗಳಲ್ಲಿ ಕಾಣಬಹುದು. ಮನುಷ್ಯನಲ್ಲಿ ತುಂಬಿರುವ ನಾನು ಎನ್ನುವ ಅಹಂಕಾರ ತೊಲಗಬೇಕಾದರೆ, ಅಹಂಕಾರವನ್ನು ತೋರಿಸುವಂತಹ, ಅದನ್ನು ನಾಶಪಡಿಸುವಂತಹ ಸನ್ನಿವೇಶವೂ, ಒಂದು ಸ್ಥಳವೂ ಬೇಕು. ನನಗಿಂತ ಮೇಲೊಬ್ಬ ಇದ್ದಾನೆಂಬ ಕಲ್ಪನೆ ಮೂಡಬೇಕು. ಅಂತಹ ಸ್ಥಳವೇ ದೇವಮಂದಿರ ಎನ್ನುವುದನ್ನು ಪು.ತಿ.ನ ಈ ಮಾತುಗಳಲ್ಲಿ ಅದ್ಭುತವಾಗಿ ವಿವರಿಸುತ್ತಾರೆ.

ಮೇಲುಕೋಟೆಯ ಮತ್ತೊಂದು ಪ್ರಸಿದ್ಧ ದೇವಾಲಯ ಬೆಟ್ಟದ ಮೇಲಿರುವ ನರಸಿಂಹನ ದೇವಾಲಯ. ಬೆಟ್ಟದ ಕೆಳಗೆ ದೊಡ್ಡ ಕಲ್ಯಾಣಿ – ಆ ಕಲ್ಯಾಣಿಯಿಂದ ಸಾಗುವ ಮೆಟ್ಟಿಲುಗಳನ್ನು ಹತ್ತುತ್ತಾ ಹೋದರೆ ಅಲ್ಲಿ ಸಿಗುವುದೇ ಈ ಯೋಗಾ ನರಸಿಂಹನ ದೇವಾಲಯ. ಪು.ತಿ.ನ ರಿಗೆ ಇದು ಆಧ್ಯಾತ್ಮಿಕ ಸ್ಥಳ – ಅವರ ಜೀವನಾನುಭವದ ಸ್ಥಳ, ಮಲೆ-ದೇಗುಲ. ಅವರ ಉಸಿರು ಎಲ್ಲಾ ಕಾವ್ಯಗಳ ಮೂಲ ಈ ಮಲೆದೇಗುಲವೇ ಆಗಿರುವುದನ್ನು ಗಮನಿಸಬಹುದು.

ಈ ಮಲೆ-ದೇಗುಲವನ್ನು ಕುರಿತು 'ಮಲೆದೇಗುಲ' ಕವನ ಸಂಕಲನದಲ್ಲಿ ಹೀಗೆ ಹೇಳುತ್ತಾರೆ.

ಸಕಲ ಸಂದೇಹಗಳು ಬಳಲಿ ಬಳಿಗೈತಂದು
ಬಿಡುವ ಬಯಸುವ ತವರೆ, ಮಲೆಯ ದೇಗುಲವೆ,
ವಾಸ್ತವದೊಳತಿ ದಿಶವು ಪಡೆದರಿವಿನರಕೆಯಿಂ-
ದೊಡೆವೈ ಶಾಂತಿಯ ಮದ್ದೆ, ಮುನಿಹೃದಯಫಲವೆ,
ಒಂದೊಂದು ನಿಲವಿನೊಳಗೊಂದೊಂದು ಸೊಗವಳಲ
ತೋರಿ ತಿರಿವೀ ಭವದ ನಿಶ್ಚಲ ಕೇಂದ್ರವೇ,
ಋಜು (ಅನೃಜು) ಋತ ಅನೃತ ಲೇಸುಕೇಡೆಂಬ ಬೆಲೆ
ಗಳವಡದ ಯೇಗಿಗಳ ಮುದದಿಂಸಾಂದರವೇ?
ನಿಂತಿಹೆನು ನಾ ನಿನ್ನ ಬಾಗಿಲೆಡೆ ನಮ್ರನಾಗಿ
ನುಡಿತುಯ್ದು ಬವಣೆಗೊಳೆ ಭಾವಗಳ ಭಾರದಿಂ ತಲೆಯ ಭಾಗಿ[2]

ಈ ಭಾವನೆ ಪು.ತಿ.ನರಿಗೆ ಮಲೆ - ದೇಗುಲದ ಮೇಲಿದ್ದ ಭಕ್ತಿ ಅನುಭಾವಗಳನ್ನು ಸೂಚಿಸುತ್ತ ಹೋಗುತ್ತದೆ. ವಾತ್ಸಲ್ಯಮಯಿಯಾದ ತಾಯಿಯೋ ಎಂಬಂತೆ ಕವಿ ದೇಗುಲವನ್ನು ಸಂಬೋಧಿಸಿದ್ದಾರೆ. ಎಲ್ಲ ಕಡೆ ಸುತ್ತಿ ಬಳಲಿದ ಸಂದೇಹಗಳು ದೇಗುಲವನ್ನು ಆಶ್ರಯಿಸುತ್ತವೆ. ಬಿಡುವಿಗಾಗಿ, ವಾಸ್ತವ ಜಗತ್ತಿನ ಜ್ಞಾನದ ಕೊರತೆ ಉಂಟುಮಾಡುವ ಅಶಾಂತಿಯನ್ನು ಹೋಗಾಲಾಡಿಸುವ ಮದ್ದು ಇದು, ಅದು ಮುನಿ ಹೃದಯದ ಫಲ, ಸುಖ ದುಃಖಗಳ

[1] ಯದುಗಿರಿಯಲ್ಲಿ ಗೆಳೆಯರು, ಸ.ಗ.ಸಂಪುಟ ಪು.248

[2] ಮಲೆ-ದೇಗುಲ : ಪು. 327 ಗ್ರ. ಸಮಗ್ರ ಕವನಗಳು

ಸಂಮಿಶ್ರಣದಿಂದ ಸುತ್ತುತ್ತಲೇ ಇರುವ ಭವದಲ್ಲಿ ದೇಗುಲ ಮಾತ್ರ ನಿಶ್ಚಲ ಕೇಂದ್ರ. ಇದು ಧರ್ಮ, ಇದು ಅಧರ್ಮ, ಇದು ಒಳಿತು, ಇದು ಕೆಟ್ಟದು ಎಂಬ ಲೌಕಿಕದ ಬೆಲೆಗಳನ್ನು ಮೀರಿದುದು. ಅಂತಹ ದೇಗುಲದ ಬಾಗಿಲಲ್ಲಿ ಕವಿಭಾವಗಳ ಭಾರದಿಂದ ಮಾತು ಭಾರವಾಗಿ ತಲೆಬಾಗಿ ನಿಂತಿದ್ದಾರೆ.[1]

ಈ ಕಾವ್ಯಸಂಚಿಕೆ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ ದೇಗುಲಗಳು ಮೋಡಗಳನ್ನು ತಡೆದಿಡುವ ಮಲೆಗಳು, ಸಾಧುಸಿದ್ಧಸಂತರ ತೇಜಗಳನ್ನು ಹೊಳೆಸಿ ಅಲೌಕಿಕ ಭಾವಗಳನ್ನು ಮಿಂಚಿಸುತ್ತಾ ಋಷಿ ಮುಖೋದ್ಗತ ಬ್ರಹ್ಮ ಬೃಂಹಿತಗಳಿಂದ ಸಕಲರನ್ನೂ ಉಲ್ಲಾಸಗೊಳಿಸುತ್ತಾ, ಎಲ್ಲಾ ತಾಪಗಳನ್ನೂ ಕಳೆಯುತ್ತಾ, ಎಲ್ಲಾ ಕಲೆಗಳನ್ನೂ ಕಳೆಗೊಳಿಸುತ್ತಾ ಮೆರೆವ ದೇಗುಲಗಳೂ, ದೇವೋತ್ಸವಗಳೂ ವನ ಪರ್ವತ ಸಾಗರಗಳಂತೆ ಮತ್ತು ಭವಾವೇಗಗಳಂತೆ ವಿಷಯಸ್ಥಾನದಲ್ಲಿ ತೀವ್ರ ಸಂವೇದನೆಯನ್ನು ಪ್ರಚೋದಿಸಿ ಕಾವ್ಯ ಜಾಗರವನ್ನು ತರಬಹುದಲ್ಲವೆ?[2]

ದೇಗುಲದ ಬಗ್ಗೆ ತಮಗಿರುವ ಅಧ್ಯಾತ್ಮ ಸಂಬಂಧವನ್ನು ಈ ಮಾತುಗಳ ಮೂಲಕವೇ ವ್ಯಕ್ತಪಡಿಸುತ್ತಾ, ದೇವಾಲಯದ ಮೇಲಿರುವ ಶ್ರದ್ಧೆ, ಭಕ್ತಿಯನ್ನು ಬಿಂಬಿಸುತ್ತಾರೆ. ನಾರಾಯಣನ ನಾಮವೇ ತನ್ನಲ್ಲಿ ಉಂಟುಮಾಡುವ ಸಂಚಲನವನ್ನು ಎಷ್ಟು ಅದ್ಭುತವಾಗಿ ಚಿತ್ರಿಸುತ್ತಾರೆಂದರೆ,

"ಚೆಲವನಾರಾಯಣಾ ಎಂಬುಲಿವು ಕಿವಿ ಸೋಕೆ
ಮಳಮಳನೆ ಕಣ್ಣ ಹನಿಯುದುರುವುದು" ಎಂದ
ಸತ್ಯ ಲೋಕನಿವಾಸಿ ರಸಕಾತರಂ ಮೌನಿ
ನನ್ನ ಉತ್ತರಿಸಲೀ ಭಾವಗಳ ತಂದ,
'ಹರಿ'ಎನ್ನೆ ಹರಿಕೆದರಿ ರೆಕ್ಕೆ ಹರಡುವ ಸಂತ-
ಎತ್ತದನುಕರಣೆಯೊಳು ಹಂಸಗತಿಗೆರೆದು
ದುರ್ಬಲ ಸ್ವಾಂತವಿದು ದೇವಕುಲನೀಡದೊಳು
ಚಡಪಡಿಸುತಿದೆ ತನ್ನ ಎಳಮೆಯನೆ ಮೆರೆದು;
ಕಾಮಭಯಲೋಭಾದಿ ಧೀವರರು ಹೊಂಚಿರಲು ಆತ್ಮದಾಮಿಷಕೆ ಕೆಳಗೆ
ಕರುಣಿಸದೆ ನೋಡುತಿದೆ ಸಾಧುತತಿ ನಸುನಗೆಯ ನೋಡದಳೆ
ಕುದುರಿಸುತ ನಿರ್ಭಯವನಲೊಗೆ".

ಚೆಲುವ ನಾರಾಯಣ ಎಂದು ಒಂದು ನಾಮ ನನ್ನ ಕಿವಿ ಸೋಕಿದರೆ ಸಾಕು ಮಳಮಳವೆಂದು ನನ್ನ ಕಣ್ಣಿನಲ್ಲಿ ನೀರು ಹರಿವುದು. ಹರಿ ಎಂದರೆ ಸಾಕು ಗರಿಕೆದರಿ ರೆಕ್ಕೆಗಳನ್ನು ಹರಡುತ್ತಾ ಬಂದು ಕರುಣೆಯಿಂದ ಸಾಂತ್ವನ ನೀಡುತ್ತಾನೆ. ಪ್ರಾಪಂಚಿಕ ಭೋಗ-ಲಾಲಸೆಗಳನ್ನು ಮೀರಿ, ಮತ್ತೊಂದು ಲೋಕವನ್ನು ಸೃಜಿಸುವಂತಹ ಸಾಮರ್ಥ್ಯವಿರುವುದು ಆ ನನ್ನ ದೇವನಿಗೆ ಎನ್ನುತ್ತಾರೆ. ನಾರಾಯಣನ ನಾಮದ ಪುಣ್ಯವನ್ನು ಸ್ಮರಿಸುತ್ತಾ ಅವರ ಉಸಿರಿನಲ್ಲಿರುವ ದೈವಿಕ ಭಾವವನ್ನು ಇಲ್ಲಿ ನೆನೆಯುತ್ತಾರೆ.

---

[1] ಕನ್ನಡದಲ್ಲಿ ಭಾವಗೀತೆ : ಡಾ.ಪ್ರಭುಶಂಕರ್ ಪು: 373

[2] ಅದೇ ಪುಟ 326

ಇದೊಂದು ಆಲೋಚನೆಯ ಮೂಲಕ ದೇವರ ಪರಿಕಲ್ಪನೆಯನ್ನು ಕಂಡುಕೊಳ್ಳುವ ದಾರಿ, ಅದೊಂದು ಬಗೆಯ ಚಿಂತನ ತಪಸ್ಸು, ಇದರ ಹಿಂದೆ ಪಾರಂಪರಿಕವಾಗಿ ಬಂದ ಆಸ್ತಿಕತೆಯ ಮೂಲಭಿತ್ತಿ ಇದು[1]

ಇಂತಹ ಕಾವ್ಯಸೃಷ್ಟಿ ಪಾರಂಪರಿಕವಾಗಿ ಬಂದಂತಹ ಆಸ್ತಿಕತೆಯ ಕಾರಣದಿಂದ. ದೇವನ ಮೂಲ ಕಲ್ಪನೆಯೇ ಇಲ್ಲದಿರುವ ವ್ಯಕ್ತಿಯಿಂದ ಇಂತಹ ನಿರೀಕ್ಷೆಯನ್ನು ಸೃಷ್ಟಿಸಲು ಸಾಧ್ಯವಿಲ್ಲ ಎನ್ನುವ ಕಲ್ಪನೆ ಈ ಮಾತುಗಳಲ್ಲಿಂದ ತಿಳಿದು ಬರುತ್ತದೆ. ಇಂತಹ ಆಸ್ತಿಕತೆಯೇ ಪು.ತಿ.ನರ ಚಿಂತನೆಯ ತಪಸ್ಸು ಎನ್ನುವುದನ್ನು ಈ ಮಾತು ಹೇಳುತ್ತಿದೆ.

ದೇವಾಲಯವೆಂದರೆ ಬರಿಯ ಶಿಲ್ಪವಲ್ಲ. ಇದು ಮನುಷ್ಯನಿಗೆ ಬೇಕಾದ ಶಾಂತಿಯನ್ನು ಕೊಡುವ ಸ್ಥಳವೆಂಬುದನ್ನು ಈ ರೀತಿಯಾಗಿ ಸೃಷ್ಟಿಸುತ್ತಾರೆ.

ರೂವಾರಿ ರೂವಿಟ್ಟ ಕಲ್ಲಲ್ಲ, ಮೂರ್ತಿಯಿದು
ಎಂತೆಂದರಂತಾಗಬಲ್ಲ ಬಯಲಲ್ಲ,
ಮನುಜನಳಲಿಂ ಮೂಡಿದೊಲುಮೆ ಮಾತ್ರವಿದಲ್ಲ
ನ್ಯಾಯ ನಡೆಸುವ ನಿಷ್ಠುರದ ನಿಯತಿಯಲ್ಲ
ಜಡದಿಂದ ಜೀವಕ್ಕೆ ಜೀವದಿಂದಾತ್ಮಕ್ಕೆ
ಆತ್ಮದಿಂ ರಸಪದಕೆ ಇರವನಿದ ಸೆಳೆವ
ಚೇತನಾಯಸ್ಕಾಂತ ಜಾನಪದ ಹೃಚ್ಛಕ್ತಿ;
ಮಾನುಷ್ಯವಿಲ್ಲಿ ಪಡೆವುದು ತನ್ನ ಬಿಡುವ,
ವಿಷಯಲಗ್ನಾನಂದವಂ ಬೇರ್ಪಡಿಸಲಾದ ತಂತ್ರಾಲಯ
ತೀರ್ಣಭವಯತಿ ಸಿದ್ಧ ಸಂಸ್ಪೃಷ್ಟದೇವಾಲಯ.

ದೇವನೆಂದರೆ ಶಿಲ್ಪಿ ಕಡೆದಿಟ್ಟ ಶಿಲ್ಪವಲ್ಲ, ಮನುಷ್ಯ ಪ್ರೀತಿಯಿಂದ ಮಾಡಿದ ಮೂರ್ತಿಮಾತ್ರವಲ್ಲ. ಜಡವಾದ ಜೀವಕ್ಕೆ, ಜೀವದಿಂದ ಆದ ಆತ್ಮಕ್ಕೆ, ಆತ್ಮದಿಂದಾದ ರಸಕ್ಕೆ ಒಂದು ಜೀವಂತಿಕೆಯನ್ನು ನೀಡುವ ಅಯಸ್ಕಾಂತವಿದು, ತನ್ನ ಮುಕ್ತಿಯನ್ನು ಸಾಧಿಸುವ ಸ್ವರ್ಗವಿದು ಎನ್ನುವ ಅಧ್ಯಾತ್ಮ, ಆತ್ಮಾನಂದದ ಭಾವ ಇಲ್ಲಿ ಸ್ಫುರಿಸುವುದನ್ನು ಕಾಣಬಹುದು.

ಇವರ ಮಲೆದೇಗುಲ ಒಂದು ಅದ್ಭುತ ಕಾವ್ಯ. ಇಲ್ಲಿ ದೇವಾಲಯದ ಕಲ್ಪನೆಗಳೇ ಅಮೋಘವಾಗಿ ಮೂಡಿ ಬಂದಿದೆ. ಜಡ ಮನಸ್ಸಿಗೆ ಒಂದು ಆಧ್ಯಾತ್ಮಿಕವಾದ ಜಾಗೃತವಾದ, ರಸೋತ್ಪನ್ನವಾದ, ಆತ್ಮಾನಂದವನ್ನು ನೀಡುವ ಒಂದು ದೀವಿಗೆ ಎಂದು ಈ ಮಲೆ-ದೇಗುಲವನ್ನು ಬಣ್ಣಿಸಬಹುದು.

---

[1] ಪು.ತಿ.ನ ಒಂದು ನೋಟ ಗ್ರಂಥ : ನಿಲುವು ಲೇ : ಎಚ್.ಎಸ್.ಆರ್ ಪು.145

ಮೇಲುಕೋಟೆಯ ದೇವಾಲಯಗಳು ಶ್ರೀವೈಷ್ಣವರ ಕ್ಷೇತ್ರವಾಗಿರುವುದರಿಂದ ಇಲ್ಲಿ ನಡೆಯುವಂತಹ ದೇವರ ಆರಾಧನೆ ಶ್ರೀವೈಷ್ಣವರಂತೆಯೇ. ಪು.ತಿ.ನ ಅವರೇ ಹೇಳುವಂತೆ ವೈದಿಕರ ವೇದಘೋಷಗಳು, ತಮಿಳು ಪಾಶುರಗಳು, ಸದಾ ದೇವಾಲಯದಲ್ಲಿ ಮುಳುಗುತ್ತಲೇ ಇರುತ್ತದೆ. ಇಲ್ಲಿನ ಪವಿತ್ರ ಉತ್ಸವಗಳಲ್ಲಿ ಅತ್ಯಂತ ಪ್ರಸಿದ್ಧವಾದ ಉತ್ಸವ 'ವೈರಮುಡಿ'* ಉತ್ಸವ. ವೈರಮುಡಿ ಎಂದರೆ ವಜ್ರಖಚಿತ ಕಿರೀಟವನ್ನು ಚೆಲುವನಾರಾಯಣನಿಗೆ ಧರಿಸಿ ಉತ್ಸವವನ್ನು ನಡೆಸುವುದು. ಈ ಉತ್ಸವಕ್ಕೆ ಎಲ್ಲಾ ಪ್ರಾಂತ್ಯದ ಭಕ್ತರೂ ಸೇರಿ ಆಚರಿಸುವುದೇ ವಿಶೇಷತೆ ಎನ್ನಬಹುದು ಈ ಉತ್ಸವ ರಾತ್ರಿ ಹತ್ತು ಘಂಟೆಯಿಂದ ಪ್ರಾರಂಭವಾಗಿ ಬೆಳಗಿನ ಜಾವ ನಾಲ್ಕು ಘಂಟೆಯವರೆಗೂ ನಡೆಯುತ್ತದೆ.

ವೈರಮುಡಿಯನ್ನು ಧರಿಸಿರುವ ಚೆಲುವನಾರಾಯಣ ಕವಿಯ ಭಾವಕ್ಕೆ ಹೀಗೆ ಸಿಗುತ್ತಾನೆ.

ಹೀರ ಮಕುಟ ಮರಕತಹಾರ  
ಆಹ ಎಂದೆ ವೇದಾತ್ಮನೆ ಧರಿಸಿಹ  
ಶ್ರೀಭೂದೇವಿಯರಿಕ್ಕೆಲದೊಳು  
ತಕ್ಕೆಡೆಯೆನೆ ಮಿಕ್ಕಿರೆ ಹರುಷದಿ  
ರಸಪದವೇ ಭವಕವತರಿಸುವ ಪರಿ  
ಖೇಚರಗಮನ ವಿಲಾಸದಿ  
ಗೋಚರಿಸುವ ಸಂಪತ್ಪ್ರದ  
ಸುಂದರ ಮುಖ  
ದರ್ಶನ ಸುಖ  
ಚಿತ್ತಕ್ಕೆ[1]

ವೈರಮುಡಿಯ ದರ್ಶನಾನಂದವನ್ನು ಈ ಕವನ ವಿವರಿಸುತ್ತದೆ. ವೈರಮುಡಿಯಿಂದ ಅಲಂಕೃತನಾದ ಚೆಲುವರಾಯ ಶ್ರೀದೇವಿ, ಭೂದೇವಿ, ಬೀಬಿನಾಚ್ಚಿಯಾರ್* ಇವರ ಜೊತೆಯಲ್ಲಿ ಉತ್ಸವ ಹೊರಡುವುದು, ರಸಾನಂದವೇ ಭೂಮಿಗೆ ಅವತರಿಸುವ ರೀತಿಯಲ್ಲಿ ಕಾಣುತ್ತದಂತೆ. ಇಂತಹ ಚೆಲುವರಾಯನ ಮುಖದ ದರ್ಶನ ಮನಸ್ಸಿಗೆ ಕವಿಗೆ ಆನಂದ ಸುಖವನ್ನು ನೀಡುತ್ತದೆ. ಇದನ್ನು ಪು,ತಿ.ನ ದರ್ಶನ ಸುಖ ಎಂದು

---

* ಜ್ಞಾನಿಗಳಾದ ಸನಕ ಸನತ್ಕು ಮಾರಾದಿಗಳು ತಿರುನಾರಾಯಣ ಸ್ವಾಮಿಯನ್ನು ಪೂಜಿಸುತ್ತಿದ್ದರಂತೆ. ಬಲರಾಮನಿಗೆ ಶೆಲ್ವಪಿಳ್ಳೆ ಇಷ್ಟ ದೈವವಾದ ಮೂರ್ತಿಯಾಗಿದ್ದನಂತೆ. ಅದಕ್ಕೆ ಈ ಉತ್ಸವ ಮೂರ್ತಿಗೆ ರಾಮಪ್ರಿಯನೆಂದು ಕರೆಯುವುದು. ಪ್ರಹ್ಲಾದನ ಮಗನಾದ ವಿರೋಚನನಿಗೆ ತಂದೆಯ ದಾಕ್ಷಿಣ್ಯದಿಂದ ವೈಕುಂಠನಾಥನ ಬಳಿಗೆ ಪ್ರವೇಶ ದೊರೆತು, ಅವನು ಸಮಯನೋಡಿ ಆತನ ಕಿರೀಟವನ್ನೇ ಕದ್ದು ಕೊಂಡೊಯ್ಯುತ್ತಿರುವಾಗ ಗರುಡ ಅದನ್ನು ಕಂಡು ಆತನನ್ನು ಹೊಡೆದು ಕಿರೀಟವನ್ನು ಹಿಂದಕ್ಕೆ ತರುವಾಗ, ದಾರಿಯಲ್ಲೇ ಶ್ರೀ ಕೃಷ್ಣನನ್ನು ನೋಡಿ, ವೈಕುಂಠ ನಾಥನಂತೆಯೇ ಅವನು ಕಾಣಲು ಕೃಷ್ಣನ ತಲೆಗೇ ಧರಿಸಿ ಹೊರಟುಹೋದನಂತೆ. ಕೃಷ್ಣನಿಂದ ಬಲರಾಮನ ಮೂಲಕ ಅದು ರಾಮಪ್ರಿಯನಿಗೆ ದೊರೆಯಿತು. ಅದೇ ಹೆಸರಾಂತ ವೈರಮುಡಿ

1. ವೈರಮುಡಿ ಉತ್ಸವ ಪು. ಸಮಗ್ರ ಕವನಗಳು ಪು.430

* ತಿರುನಾರಾಯಣ ಮೂಲವಿಗ್ರಹ ಸ್ಥಾಪನೆಯಾದ ನಂತರ, ಅದರ ಮೂಲವಿಗ್ರಹವು ದೆಹಲಿಯ ಬಾದಷಹನ ಹತ್ತಿರ ಇರುವ ಕನಸನ್ನು ಕಂಡ ರಾಮಾನುಜರು ದೆಹಲಿಗೆ ಹೋದರಂತೆ, ಆ ವಿಗ್ರಹ ಬಾಹಷಹನ ಮಗಳ ಹತ್ತಿರ ಅಂತಃಪುರದೊಳಗೆ ಇರುವುದು ತಿಳಿದು, 'ಬಾ ನನ್ನ ಶೆಲ್ವಪಿಳ್ಳೆಯೇ ಎಂದಾಗ ವಿಗ್ರಹ ಓಡಿ ಬರುವುದಂತೆ. ಆದರೆ ವಿಗ್ರಹವನ್ನು ಬಿಟ್ಟಿರಲಾರದ ರಾಜಕುಮಾರಿ ಇವರೊಡನೆ ಮೇಲುಕೋಟೆಗೆ ಬರುವಳಂತೆ, ರಾಮಾನುಜರು ಈ ಉತ್ಸವ ಮೂರ್ತಿಗೂ ರಾಜಕುಮಾರಿಗೂ ಮದುವೆ ಮಾಡಿಸುತ್ತಾರಂತೆ. ಆ ರಾಜಕುಮಾರಿಯೇ "ಬೀಬಿ ನಾಚ್ಚಿಯಾರ್' ಮೂಲ ವಿಗ್ರಹದ ಬಳಿ ಇರುವ ಸ್ತ್ರೀ ಶಿಲ್ಪವನ್ನು ಬೀಬಿನಾಚ್ಚಿಯಾರ್ ಎಂದು ಭಕ್ತರು ಗುರುತಿಸುತ್ತಾರೆ.

ಕರೆಯುತ್ತಾರೆ. ಇವರ ವೈರಮುಡಿ ಉತ್ಸವದ ರಸಾನುಭವ ಎಲ್ಲಿವರೆಗೂ ಇತ್ತೆಂದರೆ, ಪು.ತಿ.ನ ಅವರಿಗೆ ಮೇಲುಕೋಟೆ ಎಂದರೆ ಹೆಚ್ಚು ಉತ್ಸಾಹ, ತಮ್ಮ ಹುಟ್ಟಿದೂರು ಎಂಬ ಕಾರಣಕ್ಕಾಗಿ ಮಾತ್ರವಲ್ಲ, ಅಲ್ಲಿ ಬೆಟ್ಟ ದೇವಾಲಯಗಳು ಅವರ ಮೇಲೆ ಒಂದು ವಿಚಿತ್ರ ರೀತಿಯ ಮಾಯೆಯನ್ನು ಬೀಸಿವೆ. ಅವರು ಆ ಮಾಯೆಗೆ ವಶವಾಗಿದ್ದಾರೆ. ಅವರಿಗೆ ಸಂತೋಷವಾಗುತ್ತದೆ ಎಂಬ ಕಾರಣಕ್ಕಾಗಿ ನಾನು ಅವರನ್ನು ಎರಡುಸಲ ಕುಟುಂಬ ಸಮೇತವಾಗಿ ನಮ್ಮ ಕಾರಿನಲ್ಲಿ ವೈರಮುಡಿ ಉತ್ಸವಕ್ಕೆ ಕರೆದುಕೊಂಡು ಹೋಗಿದ್ದೇನೆ. ಮೊದಲ ಸಲ ನಾನು ಕಂಡ ದೃಶ್ಯ ನನ್ನ ಕಣ್ಣುಗಳನ್ನು ನಾನು ನಂಬದಂತೆ ಮಾಡಿಬಿಟ್ಟಿತು, ನಮ್ಮ ಜೊತೆಯಲ್ಲಿ ಅದು ಇದು ಮಾತನಾಡುತ್ತಾ ಪ್ರಯಾಣ ಮಾಡಿದ್ದ ಪು.ತಿ.ನ ಇದ್ದಕ್ಕಿದ್ದಂತೆ ಕಣ್ಮರೆಯಾಗಿಬಿಟ್ಟರು. ಎಲ್ಲಿ ಎಲ್ಲಿ ಎಂದು ಹುಡುಕಿದರೆ ಉತ್ಸವದಲ್ಲಿ ದೇವರ ಮುಂದೆ ಇದ್ದ ವೈದಿಕರ ಗುಂಪಿನಲ್ಲಿ ಸೇರಿಬಿಟ್ಟಿದ್ದಾರೆ. ಅದು ಅವರಂತೆ ಮಂತ್ರ ಹೇಳುವುದಕ್ಕಲ್ಲ – ಕಣ್ಣುಮಂದವಾಗಿದೆಯಲ್ಲ ಅದಕ್ಕೆ ಹತ್ತಿರದಿಂದ ವೈರಮುಡಿ ನೋಡುವುದಕ್ಕೆ! ಉತ್ಸವ ಜೊತೆ ಹಿಂದಕ್ಕೂ ಮುಂದಕ್ಕೂ ಓಲಾಡುತ್ತ ಆಗಾಗ ಮೆಟ್ಟುಗಾಲಿಟ್ಟು ವೈರಮುಡಿ ನೋಡಲು ಪ್ರಯತ್ನಿಸುತ್ತಿದ್ದಾರೆ[1].

ಈ ಮಾತುಗಳು ಪು.ತಿ.ನ ಬಾಲ್ಯದಿಂದ ಪಡೆದಿದ್ದ ಸಂಸ್ಕೃತಿಯ ದರ್ಶನ ಮಾಡಿಸುತ್ತದೆ. ತಮ್ಮ ಕಡೆಗಾಲದವರೆಗೂ ಅವರಿಗೆ ಉತ್ಸವದ ಬಗ್ಗೆ ಇದ್ದಂತಹ ಉತ್ಸಾಹವನ್ನು ತೋರಿಸುತ್ತದೆ. ತಾವು ನಂಬಿದ ಶ್ರದ್ಧೆಯನ್ನು ಕಡೆಯವರೆಗೂ ಉಳಿಸಿಕೊಂಡಿದ್ದ ಪು.ತಿ.ನ ಅದ್ಭುತವಾಗಿ ಕಾಣಿಸುತ್ತಾರೆ.

ಇವರು ಈ ಉತ್ಸವದಷ್ಟೆ ಶ್ರದ್ಧೆಯನ್ನು ಉಳಿಸಿಕೊಂಡಿದ್ದ ಮತ್ತೊಂದು ಉತ್ಸವ ವೈಲ್ ಮಾಳಿಗೆಯ ಉತ್ಸವ.* ಇದರ ಬಗ್ಗೆ ಒಂದು ಪ್ರಬಂಧವನ್ನು ಬರೆಯುತ್ತಾರೆ. ಈ ಉತ್ಸವ ನಡೆಯುವುದು ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ. ಇದೇ ಒಂದು ಸೊಬಗು ಎನ್ನುತ್ತಾರೆ. ಈ ಉತ್ಸವ ಜರುಗುವುದು ಗುಡಿಯ ಮೇಲಿನ ಬಿಸಿಲು ಮಾಳಿಗೆಯ ಪ್ರಾಕಾರಗಳಲ್ಲಿ. ಇದೇ ಈ ಉತ್ಸವದ ವೈಶಿಷ್ಟ್ಯ. ಸಾಮಾನ್ಯರಿಗೆ ಇದೊಂದೆ ಸಲ ಈ ಮಾಳಿಗೆಗೆ ಪ್ರವೇಶವಂತೆ, ಊರಿನ ಎಲ್ಲ ಜನ ಅಂದು ಈ ಮಾಳಿಗೆಯಲ್ಲಿ ತುಂಬುತ್ತಾರೆ. ಈ ಮಾಳಿಗೆಗೆ ಹೋಗುವ ದಾರಿ ಒಂದು ಕೊಠಡಿಯ ಮೂಲಕ. ಇದನ್ನು ಪು.ತಿ.ನ ಬಣ್ಣಿಸುವ ಪರಿ ಹೀಗಿದೆ.

ಇದಕ್ಕೆ ಕೆಳಗೊಂದು ಬಾಗಿಲು, ಮೇಲೆ ಮಾಳಿಗೆಗೆ ತೆರೆವ ಮತ್ತೊಂದು ಬಾಗಿಲು ಮಧ್ಯೆ ಆಳೆತ್ತರಕ್ಕೆ ಒಂದು ಚಾವಡಿ, ಈ ಚಾವಡಿಗೆ ಎರಡು ಕಡೆ ಮೆಟ್ಟಿಲು, ಕತ್ತಲು ಬಾಗಿಲುಗಳಿಂದ ಪಾರಾಗಿ ಮಳಿಗೆಯನ್ನು ಸೇರುವುದಿದೆಯಲ್ಲಾ ಅದು ಅತ್ಯಂತ ವಿನೋದಕರವಾದದ್ದು, ಈ ಕತ್ತಲೆ ಬಲುತುಂಟ ಕತ್ತಲೆ, ಕಣ್ಣನ್ನೂ ಎಷ್ಟು ಅರಳಿಸಿದರೂ ಅದು ಕಾಣದು, ಇಂಥ ಜೀವಂತ ಕತ್ತಲನ್ನೂ ನಾನು ಇನ್ನೂ ಎಲ್ಲೂ ಅನುಭವಿಸಿಲ್ಲ, ಈ ಮಾಳಿಗೆಗೆ ಬಂದರೆ ನಾವು ಬೇರೊಂದು ಲೋಕಕ್ಕೆ ಬಂದಿದ್ದೇವೆ ಎಂಬ ಭಾವವು ನಮ್ಮನ್ನು ಆವರಿಸುತ್ತದೆ[2]

---

[1] ಪು.ತಿ.ನ ಒಂದು ಆತ್ಮೀಯ ನೋಟ : ಡಾ.ಪ್ರಭುಶಂಕರ ಗ್ರ- ಪು.ತಿ.ನ ನೂರರ ನೆನಪು ಸ. ಕಮಲಾನರಸಿಂಹ ಪು-22

* ವೈಲ್ ಮಾಳಿಗೆ ಎಂದರೆ 'ಬಿಸಿಲು ಮಾಳಿಗೆ' ಅಥವಾ ಬಯಲು ಮಾಳಿಗೆ. ಇದು ಗುಡಿಯ ಮೇಲಿರುವ ಮಾಳಿಕೆ.

[2] ವೈಲ್ ಮಾಳಿಗೆ ಉತ್ಸವ : ಸ.ಗ.ಸಂ ಪು.31

ಈ ಕತ್ತಲಿನಲ್ಲೆ ಚೆಲುವರಾಯನು ವೈಕುಂಠನಾಥನ ಹಾಗೆ ವೇಷವನ್ನು ಧರಿಸಿ ಏಳು ಹೆಡೆಯ ನಾಗರದ ಮೇಲೆ ಲೀಲೆಯಿಂದ ಪವಡಿಸಿ ಬಹುಸುಂದರವಾಗಿ ಅತ್ತ ಇತ್ತ ಸುತ್ತುತ್ತಿರುತ್ತಾನಂತೆ "ಇದರ ನೋಟ ಬಲು ಅಂದ, ಬಲು ಅಂದ ತಮಸ್ಸಿನಿಂದ ಬೆಳಕಿಗೆ ಈ ಯಾತ್ರೆ – ಭವದಿಂದ ಅಭವನ ದರ್ಶನಕ್ಕೆ" ಎನ್ನುವ ಭಾವವನ್ನು ಇಲ್ಲಿಕಾಣುತ್ತೇವೆ. ಈ ಅಲಂಕಾರಕ್ಕೆ ಉತ್ಸಾಹಕ್ಕೆ ಕಾರಣ ರಾವಣನ ವಧೆ ಮಾಡಿದ ನಂತರ ವಿಜಯೋತ್ಸವದ ಸಂಭ್ರಮ, ಸತೋಷವನ್ನು ಹಂಚಿಕೊಳ್ಳಲು ಚೆಲುವ ನಾರಾಯಣನಿಗೆ ಈ ವೇಷವನ್ನು ಹಾಕಿ ನಡೆಸುವ ಉತ್ಸವ, ಇದಕ್ಕೆ ಸಾಕ್ಷಿಯಾಗಿ ಮಾಳಿಗೆಯ ಮೇಲೆ ಹಗ್ಗದ ಮೇಲೆ ನಿಂತು ಬಾಣಗಳನ್ನು ಬಿಡುವುದು, ರಾಕ್ಷಸರ ಮತ್ತು ದೇವತೆಗಳ ಹಾಗೆ ಬಾಣಗಳನ್ನು ಬಿಟ್ಟ ನಂತರ ವಿಜಯೋತ್ಸವವನ್ನು ಆಚರಿಸಿ ಆನಂದಪಡುತ್ತಾ ಕೆಳಕ್ಕೆ ಬರುವುದಂತೆ ಇಂತಹ ಆನಂದ ಮತ್ತೆಲ್ಲೂ ಸಿಗಲಿಕ್ಕೆ ಸಾಧ್ಯವಿಲ್ಲ ಎನ್ನುತ್ತಾರೆ.

"ಎಲ್ಲರಿಗೂ ಒಂದು ತೆರದ ಹುಚ್ಚಿನ ಆನಂದ, ಗೆಲವನ್ನು ಪಡೆದವ ಚೆಲುವರಾಜ ಆತನ ಪಡೆ ನಾವು, ನೋಟಕರಲ್ಲ - ಪಾತ್ರಗಳು ನಾವು, ಇದು ಲೀಲೆಯಾದರೆ ನಲಿವವರು ನಾವು, ನಾಟಕವಾದರೆ ವೇಷಧಾರಿಗಳು ನಾವು ನಮಗುಂಟಾಗುವ ಆನಂದ ಮತ್ತೊಬ್ಬರ ನಟನದಿಂದಾಗುವ ಅನುರಣನವಲ್ಲ; ಸ್ವಯಂ ಅನುಭವ ಸಿದ್ಧನಾಗುವ ಆನಂದ" ಇಂತಹ ಆನಂದ ಪಡೆಯುವ ಮನುಷ್ಯನ ಜನ್ಮವೇ ಧನ್ಯ ಎಂಬುದು ಪು.ತಿ.ನ ರ ಭಾವನೆ. ಹೀಗೆ ಹೇಳುತ್ತಾ ದೇಗುಲವನ್ನು ಕುರಿತು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾರೆ. "ಗುಡಿ ದೇವರು ಉತ್ಸವಾದಿಗಳಿಂದ ನಾವು ಪಡೆಯುವ ಅನುಭವ ತೀರ ವಿಚಿತ್ರ. ಗುಡಿ ಮಾನವನ ಬಾಳಿಗೆ ಕೆರೆಗೆ ತೂಬಿದ್ದ ಹಾಗೆ. ಸಂದಿ ಇಕ್ಕಟ್ಟು. ಆದರೆ ಕೆರೆಯ ನೀರಿನ ಸೆಳೆತವೆಲ್ಲಾ ಆ ರಂಧ್ರದ ಕಡೆಗೆ ಅಲ್ಲವೇ ಹಾಗೆ ಗುಡಿ ಭವ ಮುಕ್ತಿಯ ಆಸೆಯನ್ನು ತೋರಿ ಜನತೆಯನ್ನು ತನ್ನೆಡೆಗೆ ಸೆಳೆಯುತ್ತದೆ. ಗುಡಿಯು ಆತ್ಮದ ಸಾಕ್ಷಾತ್ಕಾರಕ್ಕೆ ಕಾರಣೀಭೂತವಾಗಿ, ಮನುಷ್ಯ ತನ್ನ ಸುಖ-ದುಃಖಗಳನ್ನು ಮರೆತು, ಮುಕ್ತಿಗೆ ದಾರಿ ತೋರುವ ದೀಪ. ಇದೇ ಪು.ತಿ.ನ ಅವರ ಆತ್ಮದರ್ಶನ.

ಬೇರೆ ಧರ್ಮಗಳ ದೇವಾಲಯಗಳಿಗೆ ಹಿಂದೂ ಧರ್ಮದ ದೇವಾಲಯಗಳನ್ನು ಹೋಲಿಸುತ್ತಾ ಬಹಳ ವಿಚಾರಪೂರ್ಣವಾಗಿ ವಿಶ್ಲೇಷಿಸುತ್ತಾರೆ.

"ನಮ್ಮ ದೇಗುಲಗಳನ್ನು ಇತರ ಮತೀಯರ ಮಂದಿರಗಳಿಗೆ ಹೋಲಿಸುವುದರಲ್ಲಿ ಅರ್ಥವೇ ಇಲ್ಲ, ನಮ್ಮ ದೇವರು ಆನಂದ ಸ್ವರೂಪ ಆತನಿಂದಲೇ ನಮಗೆ ಮುಕ್ತಿ, ಮಿಕ್ಕವರ ದೈವಭಾವದ ಮೂಲದಲ್ಲಿ ಸಂಕಟವಿದೆ, ನೈಷ್ಠುರ್ಯವಿದೆ ಆ ಸರ್ವಶಕ್ತನಾದ ದೈವದೆಡೆ ನಾವು ತೋರಬೇಕಾದುದು ದೈನ್ಯಭಾವ ಮಾತ್ರ. ಬೇಡಬೇಕಾದುದು ಕ್ಷಮೆ, ದಯೆ ಈ ಇಚ್ಛೆಯಂತೆ ಅಲ್ಲಿನ ಆಗಮ.

ನಮ್ಮ ದೇವಾಲಯದ ಧ್ಯೇಯವೇ ಬೇರೆ, ಅಲ್ಲಿ ನಾವು ಬಯಸುವುದು ಚಿಂತಾವಿಮುಕ್ತಿ, ಉಲ್ಲಾಸ, ಸಂತೋಷ. ಈ ದೇವರನ್ನು ಸರ್ವ ಸಮೃದ್ಧನೆಂದೂ, ಶ್ರೀಯ ಶ್ರೀಪತಿಯೆಂದೂ, ಆನಂದ ಸ್ವರೂಪನೆಂದೂ ಕರೆದು, ಆತನ ಮಂದಿರದಲ್ಲಿ ಈ ಗುಣಗಳ ಸ್ವಲ್ಪವನ್ನಾದರೂ ನಾವು ಅನುಭವಿಸಿದರೆ ಹೋದರೆ ಏನು ಸಾರ್ಥಕ[1]

ಈ ಒಂದೊಂದು ಮಾತುಗಳು ಪು.ತಿ.ನ ರ ಮನಸ್ಸಿನಾಳದಿಂದ ಬಂದವು. ಯಾವ ಧರ್ಮದ ಬಗ್ಗೆಯೂ ಭಿನ್ನತೆ ತೋರದೆ ಸಮಾನ ಮನಸ್ಸಿನಲ್ಲಿ ಚಿಂತನೆ ನಡೆಸುವ ಇವರು ಅವರವರು ನಂಬಿದ ಸಂಸ್ಕಾರದಂತೆ ಅವರವರು ದೈವ ದರ್ಶನ ಪಡೆಯುತ್ತಾರೆ. ನಾವು ನಂಬಿದ ಧರ್ಮ ದೈವವನ್ನು, ಆನಂದ ಸ್ವರೂಪಿಯಾಗಿ ಬಣ್ಣಿಸುವಾಗ ಆ ಆನಂದ ನಮ್ಮ ದೇವಾಲಯಗಳಿಂದ ತಾನೇ ದೊರೆಯುವುದು. ಇಂತಹ ಮುಕ್ತಿ ಆನಂದವನ್ನು ಅಲ್ಲವೇ ಮನುಷ್ಯ ಬಯಸುವುದು. ಆದ್ದರಿಂದಲೇ ದೇವಾಲಯಗಳು ನಮ್ಮ ಆತ್ಮ ಎಂಬುದೇ ಪು.ತಿ.ನ ರ ಧರ್ಮದರ್ಶನ ಎನ್ನಬಹುದು. ಈ ಒಂದು ಕಲ್ಪನೆಯೇ ಅವರನ್ನು ಸಂಸ್ಕೃತಿ ಕವಿ ಎಂದು ನಿರೂಪಿಸುವುದು.

ದೇವಾಲಯಗಳ ಶ್ರದ್ಧೆಯನ್ನು ಬೆಳೆಸಿಕೊಂಡು ಬೆಳೆದ ಮೇಲುಕೋಟೆ, ವರ್ಷದಾದ್ಯಂತ ಅನೇಕ ಉತ್ಸವಗಳನ್ನು ನಡೆಸಿಕೊಂಡು ಬರುತ್ತಿದೆ, ಪ್ರತಿನಿತ್ಯ ದೇವಾಲಯಗಳಲ್ಲಿ ಸಹಸ್ರನಾಮ, ಶಾತ್ತುಮೊರೆ, ತಿರುವಂದಿಕ್ಕಾಪ್* ರಾಮಾಯಣದ ಪದ್ಯಗಳ ವಾಚನ ನಡೆಯುತ್ತದೆ. ಇಂತಹ ಉತ್ಸವಗಳು ಅತ್ಯಂತ ಶ್ರದ್ಧೆಯಿಂದ ಬೇರೆ ಎಲ್ಲೂ ನಡೆಯದ ಹಾಗೆ ನಡೆಯುತ್ತದೆ ಎಂಬುದು ಪು.ತಿ.ನ ರ ಅನಿಸಿಕೆ ಇಂಥ ಜನ, ಇಂಥ ಗುಡಿ, ಇಂಥ ಚೆಲುವರಾಯ, ಇಂಥ ಉತ್ಸವಗಳು ಬೇರೆ ಎಲ್ಲೂ ಇಲ್ಲ[2]

ಪು.ತಿ.ನರವರ ಈ ಸಾಹಿತ್ಯದ ಮೂಲಕ ಅವರಿಗೆ ಅವರ ಸಂಸ್ಕೃತಿಯ ಮೇಲಿರುವ ಶ್ರದ್ಧೆ, ಭಕ್ತಿ ದೇವಾಲಯಗಳ, ಮೇಲಿರುವ ಶ್ರದ್ಧೆ, ಭಕ್ತಿ, ನಂಬಿಕೆ, ಆ ದೇಗುಲಗಳಿಂದ ಪಡೆಯುವ ಆತ್ಮ ಸಂತೋಷ, ಮುಕ್ತಿ ಆನಂದಗಳನ್ನು ನೋಡಬಹುದು.

ಈ ಕ್ಷೇತ್ರದಲ್ಲಿ ನಡೆಯುವ ಮತ್ತೊಂದು ಉತ್ಸವ ಪವಿತ್ರೋತ್ಸವ. ಇದು ಸಹ ಪು.ತಿ.ನರಿಗೆ ಬಹಳ ಅಚ್ಚುಮೆಚ್ಚು, ಇದನ್ನು ಪ್ರಾಯಶ್ಚಿತ್ತ ಉತ್ಸವ ಎಂದೂ ಕರೆಯುತ್ತಾರೆ. ದೇವಾಲಯಗಳಲ್ಲಿ ದೇವರಿಗೆ ನಡೆದ ಅಪಚಾರಗಳೆಲ್ಲದರ ಪರಿಹಾರಕ್ಕಾಗಿ ಈ ಉತ್ಸವವನ್ನು ನಡೆಸುತ್ತಾರೆ. ಇದು ಭಕ್ತರಲ್ಲಿ ಸಮಾಧಾನವನ್ನು ತರುವಂತಹ ಉತ್ಸವ ಎನ್ನುತ್ತಾರೆ. ಈ ಉತ್ಸವದ ವಿಶೇಷತೆ ಯಜುರ್ವೇವೇದದ ಏಳು ಕಾಂಡಗಳ ಪಾರಾಯಣ ಮತ್ತು ಪಂಚರಾತ್ರಾಗಮದ ಪ್ರಕಾರ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎನ್ನುವ ಚತುರ್ವ್ಯೂಹಗಳ ಪೂಜೆ, ಇಲ್ಲಿರುವ ಪ್ರತಿಯೊಂದು ದೇವರುಗಳಿಗೂ

---

[1] ತಿರುನಕ್ಷತ್ರ ಪು.ತಿ.ನ ಸ.ಗ.ಸಂಪುಟ. ಪು – 100

* ಸಂಜೆಯಲ್ಲಿ "ತಿರುವಂದಿಕ್ಕಾಪ್" ಎಂಬ ದೀವಟಿಗೆ ಸಲಾಮು, ದೀಪರಾಧನೆಯೂ ನಡೆಯುತ್ತದೆ. ಸಹಸ್ರನಾಮಾರ್ಚನೆಯ ಸಮಯದಲ್ಲಿ ಮುಕಂದ ಮಾಲೆ ಮತ್ತು ಆಳವಂದಾರ್ ವಿರಚಿತ ಸ್ತೋತ್ರರತ್ನವನ್ನು ರಾಗವಾಗಿ ಹಾಡುತ್ತಾರೆ.

[2] ವೈಲ್ ಮಾಳಿಗೆ ಉತ್ಸವ : ಸ.ಗ. ಸಂಪುಟ ಪು. 34

ನೂಲುರೇಷ್ಮೆಗಳಿಂದ ಮಾಡಿದ 'ಪವಿತ್ರ'ಎಂಬ ಮಾಲೆಗಳನ್ನು ಹಾಕುತ್ತಾರೆ. ರಾತ್ರಿಯಲ್ಲಿ ಚೆಲುವರಾಯನಿಗೆ ಉತ್ಸವ. ಇವುಗಳನ್ನು ಪು.ತಿ.ನ ನಿಗಮಾಗಮಗಳ ಮನೋಹರ ಸಮ್ಮೇಳನವನ್ನು ಈ ಉತ್ಸವ ಚೆನ್ನಾಗಿ ಪ್ರತಿನಿಧಿಸುತ್ತದೆ ಎನ್ನುತ್ತಾರೆ[1].

ಇನ್ನೂ ಪು.ತಿ.ನ ರಿಗೆ ಬಹಳ ಪ್ರೀತಿ ಪಾತ್ರವಾದ ಮಲೆ-ದೇಗುಲದ ಯೋಗಾನರಸಿಂಹರಿಗೆ ನಡೆಯುವ ಉತ್ಸವ 'ನರಸಿಂಹ ಜಯಂತಿ'. ಅಂದು ಇಡೀ ಮೇಲುಕೋಟೆ ಮಲೆಯಲ್ಲಿಯೇ. ಊರೆಲ್ಲವೂ ಸಂಭ್ರಮದಿಂದ ಆಚರಿಸುವ ಹಬ್ಬವದು. ಪಾನಕ, ಕೋಸಂಬರಿಯನ್ನು ಮಾಡಿ ಸಂಜೆಯಲ್ಲಿ ನಡೆಸುವಂತಹ ಉತ್ಸವವದು.

ಧನುರ್ಮಾಸದಲ್ಲಿ ನಡೆಯುವ ಉತ್ಸವಗಳನ್ನು ಪು.ತಿ.ನ ಬಹಳ ವಿಶೇಷವಾಗಿ ಹೇಳುತ್ತಾರೆ. ಈ ಮಾಸದಲ್ಲಿ ಬೆಳಗಿನ ಜಾವವೇ ನಡೆಯುವ ಪೂಜೆ, ವಿಜೃಂಭಣೆಯಿಂದ ಕೂಡಿರುತ್ತದೆ. ಆಗ ಇಲ್ಲಿ ನಡೆಯುವುದು 'ಶಾತ್ತುಮೊರೆ'* 'ತಿರುಪ್ಪಾವೈ'* 'ಪಾಶುರಗಳ ಪಠಣ,* 'ರಾಮಾನುಜರ ಗದ್ಯತ್ರಯ'ದ ಪಾರಾಯಣ, ಇವುಗಳ ಜೊತೆಯಲ್ಲಿಯೇ ಮಧ್ಯಾಹ್ನದಲ್ಲಿ ಮಲೆಗುಡಿಯ ನರಸಿಂಹನಿಗೆ ವಿಶೇಷ ಪೂಜೆ. ಹೀಗೆ ಪು.ತಿ.ನರು ತಮಗೆ ಬಹಳ ಪ್ರಿಯವಾದ ಉತ್ಸವಗಳನ್ನು, ಅದರ ಆಚರಣೆಗಳನ್ನು ಉತ್ಸಾಹದಿಂದ ಭಕ್ತಿ ಭಾವದಿಂದ ವರ್ಣಿಸುತ್ತಾರೆ. ಇಂತಹ ದೈವಿಕ ಮನೋಭಾವದ, ಅಂತಃಸತ್ವದ, ಆತ್ಮೋದ್ಧಾರಕ ಕವಿಗಳಲ್ಲಿ ನಮ್ಮ ಪು.ತಿ.ನ ರೇ ಶ್ರೇಷ್ಠರು ಎಂದು ಹೇಳಬಹುದು.

## ಆ) ಶ್ರೀ ರಾಮಾನುಜಾಚಾರ್ಯರು

ರಾಮಾನುಜರು ಅವತಾರ ಮಾಡಿ ಈಗ ಎಂಟುನೂರು ವರ್ಷಗಳ ಮೇಲಾಯಿತು. ಅವರಿಂದೀಚೆಗೆ ಈ ನಾಡಿನಲ್ಲಿ ಎಷ್ಟು ಪ್ರಜೆ ಹುಟ್ಟಿದೆ ಕ್ಷಯಿಸಿದೆ! ಸಮುದ್ರಮಧ್ಯದಲ್ಲಿ ಎದ್ದುನಿಂತ ಹವಳದ ಬಂಡೆಯಂತೆ ಜನತಾ ಸಮುದ್ರ ಮಧ್ಯದಿಂದ ಈ ಸ್ಥಿರಬುದ್ಧಿ ಎದ್ದು ನಿಂತಿರಲು ಎಷ್ಟೊಂದು ಜೀವಗಳು ಪೂಜಾಸ್ತುತಿಗಳ ನೆವದಿಂದ ತಮ್ಮ ಭಾವದೆಲೆಗಳನ್ನು ಇವರ ಪಾದದೆಡೆಗೆ ಉರುಳಿಸಿ ಮರಳಿಸುತ್ತಿವೆ! ಇನ್ನೂ ಈ ಗುರುಭಕ್ತಿಯ ಪ್ರೇಂಖೋಲ ನಿಂತಿಲ್ಲ. ಅನೇಕ ಜೀವರಾಶಿಗಳಲ್ಲಿ ಒಂದು ಚೈತನ್ಯಕ್ಕೆ ಮಾತ್ರ ಅಂಥ ಭಕ್ತಿ ಪ್ರಚೋದಕವಾದ ದಿವ್ಯಶಕ್ತಿ ಹೇಗೆ ಒದಗಿಬರುತ್ತದೊ ಕಾಣೆ[2]

---

[1] ಮೇಲುಕೋಟೆ : ಪು. ಸಮಗ್ರ ಗದ್ಯ ಸಂಪುಟ ಪು.853

* ಭಾಗವತ, ವೇದಗಳು, ಪುರಾಣದಲ್ಲಿರುವ ಎಲ್ಲಾ ಮುಖ್ಯವಾದ ಅಂಶಗಳನ್ನು ಹಾಡುವಂತಹುದೇ ಶಾತ್ತುಮೊರೈ.

* ಶ್ರೀಅಂಡಾಳ್ ದೇವಿ ಭಗವಂತನನ್ನು ಆರಾಧಿಸುವ ಮುವ್ವತ್ತು ಪದ್ಯಗಳ ಕೃತಿಗೆ 'ತಿರುಪ್ಪಾವೈ' ಎನ್ನುತ್ತಾರೆ. ಧನುರ್ಮಾಸದ ಮುವತ್ತು ದಿನಗಳಲ್ಲಿ ಒಂದೊಂದು ದಿನ ಒಂದೊಂದು ಪದ್ಯವನ್ನು ಹಾಡಿದರೆ ಶ್ರೇಷ್ಠ ಎಂಬ ಭಾವನೆಯಿಂದ ಎಲ್ಲಾ ಶ್ರೀವೈಷ್ಣವ ದೇವಾಲಯಗಳಲ್ಲಿ ಇದನ್ನು ಹಾಡುತ್ತಾರೆ.

* ನಾಲಾಯಿರ ಪ್ರಬಂಧಗಳ ಬಿಡಿಭಾಗಗಳಿಗೆ ಪಾಶುರವೆನ್ನುತ್ತಾರೆ.

[2] ತಿರುನಕ್ಷತ್ರ ಪು :99 ಸ.ಗದ್ಯ ಸಂಪುಟ

ಈ ವಾಕ್ಯಗಳಿಂದಲೇ ರಾಮಾನುಜಾಚಾರ್ಯರ ಮೇಲೆ ಪು.ತಿ.ನ ರಗಿರುವ ಭಕ್ತಿ ಗೌರವಗಳು, ಸಾಬೀತಾಗುತ್ತದೆ. ಪು.ತಿ.ನ ರ ಮನಸ್ಸು ಒಂದು ಧಾರ್ಮಿಕ ಕ್ಷೇತ್ರವಾಗಿರುವುದರಿಂದ ನಮ್ಮ ಪ್ರಾಚೀನ ಮಹಾತ್ಮರಲ್ಲಿ ಅವರಿಗೆ ಗೌರವ ಹೆಚ್ಚು, ಶಂಕರಾಚಾರ್ಯರು, ಬುದ್ಧ, ಬಸವ, ರಾಮಾನುಜಾಚಾರ್ಯ ಸಿದ್ಧಾಂತಗಳ ಬಗ್ಗೆ ಒಲವು ಹೆಚ್ಚಾಗಿಯೇ ಇದೆ. ಈ ನಾಲ್ಕು ಜನರಲ್ಲಿ ಶಂಕರಾಚಾರ್ಯರನ್ನು ಉಳಿದು ಮೂರು ಜನರ ಚಿತ್ರಣಗಳನ್ನು ಅವರು ತಮ್ಮ ಲೇಖನಗಳ, ಕಾವ್ಯಗಳ ಮೂಲಕ ನೀಡುತ್ತಾರೆ.

ಪು.ತಿ.ನರಿಗೆ ಬಾಲ್ಯದಲ್ಲಿಯೇ ರಾಮಾನುಜರ ಸಿದ್ಧಾಂತದ ಪರಿಚಯವಿತ್ತು ಎನ್ನುವುದು ಈಗಾಗಲೇ ನಮಗೆ ತಿಳಿದಿದೆ. ಅವರ ಸಾಹಿತ್ಯದಲ್ಲಿ ಆ ಸಿದ್ಧಾಂತದ ದರ್ಶನಗಳನ್ನೂ ನೋಡುತ್ತೇವೆ. ಬರಿಯ ಒಂದು ಸಿದ್ಧಾಂತದಿಂದ ಮಾತ್ರ ಒಬ್ಬ ವ್ಯಕ್ತಿ ಪ್ರಭಾವಬೀರಲು ಸಾಧ್ಯವಿಲ್ಲ, ಅದಕ್ಕೂ ಆಚೆ ಅವನಲ್ಲಿ ಏನು ಒಂದು ಆಕರ್ಷಣೆ ಇರುತ್ತದೆ. ಒಂದು ಶಕ್ತಿ ಇರುತ್ತದೆ. ಆ ಶಕ್ತಿಯೇ ಇತರರನ್ನು ಆಕರ್ಷಿಸಿ ಭಕ್ತಿ, ಗೌರವವನ್ನು ನೀಡುವಂತೆ ಮಾಡುತ್ತದೆ. ಇಂತಹ ಶಕ್ತಿಯುನ್ನುಳ್ಳ ಮಹಾತ್ಮರು ಶ್ರೀರಾಮಾನುಜಾಚಾರ್ಯ.

ತಮಿಳುನಾಡಿನ ಪೆರಂಬದೂರು ಜಿಲ್ಲೆಯಲ್ಲಿ ಜನಿಸಿದ ಇವರು ಬಾಲ್ಯದಲ್ಲಿಯೇ ವಿಚಾರ ಮಾಡುವ ಶಕ್ತಿಯುನ್ನು ಪಡೆದಿದ್ದರು. ಆದ್ದರಿಂದಲೇ ತಮ್ಮ ಗುರುವಿನ ಕೆಲವು ಉಪದೇಶಗಳನ್ನು ಒಪ್ಪದೇ ತಮ್ಮದೇ ಆದ ಸಿದ್ಧಾಂತಗಳನ್ನು ರೂಪಿಸಿದ್ದರು. ಕುಲ,ಜಾತಿಗಳಿಗೆ ಮನ್ನಣೆ ನೀಡದೆ ವೈಶ್ಯಕುಲದವರಾದ ತಿರುಕ್ಕುಚ್ಚಿ ನಂಬಿಯವರನ್ನು ತಮ್ಮ ಗುರುವಾಗಿ ಸ್ವೀಕರಿಸಿ ಮಾರ್ಗದರ್ಶನ ಪಡೆದರು. ಮುಂದೆ ಗೋಷ್ಠಿಪೂರ್ಣರಲ್ಲಿ ದ್ವಯಮಂತ್ರದ ರಹಸ್ಯಗಳನ್ನು ಕಲಿಯಲು ಹೊರಟರು. ಆದರೆ ಅಷ್ಟು ಸುಲಭವಾಗಿ ಸಿಗದ ಈ ಮಂತ್ರ, ನಾನಾ ಪರೀಕ್ಷೆಗೆ ಒಳಗಾಗಿ, ಗುರುವಿನ ಪ್ರೀತಿಗೆ ಪಾತ್ರರಾದ ಮೇಲೆ ದೊರೆಯಿತು, ಇದನ್ನು ಗುಟ್ಟಾಗಿ ಇಡಬೇಕೆಂಬ ಷರತ್ತಿನಲ್ಲಿ ಆದ ದ್ವಯಮಂತ್ರದ ಉಪದೇಶವನ್ನು, ಮಾರನೇ ದಿನದ ಬೆಳಿಗ್ಗೆಯೇ ಗೋಪುರವನ್ನೇರಿ ಇಡೀ ಎಲ್ಲ ಜನರಿಗೂ ಕೇಳಿಸುವಂತೆ ಬೋಧಿಸಿದರು. ಗೋಷ್ಠಿ ಪೂರ್ಣರಿಗೆ ಇದು ತಿಳಿದು, ರಹಸ್ಯವಾಗಿಡಬೇಕಾದ ಮಂತ್ರವನ್ನು ಸಾರ್ವಜನಿಕ ಮಂತ್ರವನ್ನಾಗಿ ಮಾಡಿದ್ದಕ್ಕಾಗಿ ನರಕಕ್ಕೆ ಭಾಜನಾಗಬೇಕಾಗುತ್ತದೆ ಎಂದಾಗ ಅನೇಕ ಜೀವನಗಳ ಉದ್ಧಾರ ಈಗ ಆಗಿರುವುದರಿಂದ ನಾನೊಬ್ಬ ನರಕಕ್ಕೆ ಹೋದರು ಚಿಂತೆಯಿಲ್ಲ[1] ಎನ್ನುತ್ತಾರಂತೆ. ಅದುವರೆವಿಗೂ ರಹಸ್ಯವಾಗಿ ಇದ್ದಂತಹ ಶ್ರಿವೈಷ್ಣವ ತತ್ತ್ವ "ಓಂನಮೋ ನಾರಾಯಣಾಯ" ಅಂದು ಸಾರ್ವಜನಿಕವಾಗುವುದರ ಮೂಲಕ ಅನುಷ್ಠಾನವಾಗಿ ಪ್ರಸಿದ್ಧಿ ಪಡೆಯಿತು ಎನ್ನುವ ನಂಬಿಕೆಯಿದೆ.

ಈ ಕಥೆಗಳೆಲ್ಲಾ ನಮಗೆ ನೀಡುವುದು ಏನೆಂದರೆ ರಾಮಾನುಜರ ವ್ಯಕ್ತಿತ್ವ ದರ್ಶನವನ್ನು ಯಾವುದೇ ಒಂದು ವಸ್ತುವೂ ಸ್ವಾರ್ಥಕ್ಕಾಗಿ ಉಪಯೋಗವಾಗದೆ, ಅದು ಲೋಕೋದ್ಧಾರಕ್ಕಾಗಿ ಬಳಕೆಯಾಗಬೇಕೆಂಬ ಆದರ್ಶ, ಇಂತಹ ಗುಣಗಳೇ ಮಾಹಾತ್ಮರಾಗಲು ಸಹಾಯಕವಾಗಿ ನಿಂತಿರುವಂತಹ

---

[1] ರಾಮಾನುಜಾಚಾರ್ಯ : ಆರ್.ಪಾರ್ಥಸಾರಥಿ ಪು. 31

ಸ್ತಂಭಗಳು. ಇವರ ಈ ಮಾನವೀಯ ಗುಣಗಳೇ ದೇವಾಲಯಗಳಲ್ಲಿ ಅಸ್ಪೃಶ್ಯರನ್ನು ಆಹ್ವಾನಿಸುವಂತೆ ಮಾಡಿದ್ದು, ಅಸ್ಪೃಶ್ಯರನ್ನು 'ತಿರುಕ್ಕುಲುತ್ತಾರ್' ಎಂದು ವಿಶೇಷ ಪ್ರೀತಿಯಿಂದ ಕರೆದು ಗೌರವಿಸುವಂತೆ ಮಾಡಿದ್ದು.

ಇಂತಹ ರಾಮಾನುಜರು ಕರ್ನಾಟಕಕ್ಕೆ ಒಂದು 14 ವರ್ಷ ಮೇಲುಕೋಟೆಯಲ್ಲಿ ನೆಲೆಸಿ, ಅದನ್ನು ಪ್ರಸಿದ್ಧ ಶ್ರಿವೈಷ್ಣವ ಕ್ಷೇತ್ರವನ್ನಾಗಿ ಮಾಡಿದರು. ಇವರ ನೆನಪಿಗಾಗಿಯೇ ಈ ಮೇಲುಕೋಟೆಯನ್ನು ಯತಿರಾಜಪುರವೆಂದು ಕರೆಯುತ್ತಾರೆ. ಇಂತಹ ಶಕ್ತಿ ಒಬ್ಬಸಾಮಾನ್ಯ ಮನುಷ್ಯನಿಗೆ ಸಾಧ್ಯವಿಲ್ಲವೆಂಬ ನಂಬಿಕೆ ಪು.ತಿ.ನ ಅವರಲ್ಲೂ ಕಾಣುತ್ತೇವೆ.

ಹುತ್ತದಲ್ಲಿರುವ ನಾರಾಯಣನಂತೆ ಆ ಆತ್ಮವನ್ನು ಹೊರಕ್ಕೆ ತರಬೇಕಾದರೆ ಧೈರ್ಯಬೇಕು, ಕೌಶಲ ಬೇಕು. ಈ ಧೃತಿ, ಈ ಕುಶಲತೆ ಸಾಮಾನ್ಯರಿಗೆ ಅಲಭ್ಯವೇ ಸರಿ. ಇಂಥ ಮಹಾನುಭಾವರ ಅವತಾರ ಕಾಲದಲ್ಲಿ ಮಾತ್ರ ಸಮಸ್ತ ಜನತೆಗೂ ಆತ್ಮೋದ್ಧಾರಣ ಸಾಧ್ಯವಾಗುತ್ತದೆ. ಆಗ ಆ ಉದ್ಧೃತಾತ್ಮರ ಬಾಳ್ವೆ ತೇಜೋಜ್ವಲವಾಗಿ ಬೆಳಗುತ್ತದೆ. ಅವರು ಪಡುವ ಆನಂದಾನುಭೂತಿ ಜನ್ಮ ಜನ್ಮದಲ್ಲೂ ಪುನಾರಾವೃತ್ತಿಗೊಂಡು ಅಮೃತವಾಗುತ್ತದೆ.[1]

ರಾಮಾನುಜಾಚಾರ್ಯರ ಸ್ಮರಣೆಗಾಗಿ ನಡೆಸುವಂತಹುದೆ ರಾಮಾನುಜಾಚಾರ್ಯ 'ತಿರುನಕ್ಷತ್ರ'[*] ಆಚರಣೆ ಇದರ ಆನಂದವನ್ನು ಪು.ತಿ.ನವರಿಂದಲೇ ಕೇಳಬೇಕು.

"ಈಗ ಭಾಷ್ಯಕಾರರು ಪಲ್ಲಕ್ಕಿಯಲ್ಲಿ ಮಂಡಿಸಿದ್ದಾರೆ ಅವರು ಜೀವಿಸಿದ್ದಾಗ ಯಾವ ರೀತಿಯಲ್ಲಿದ್ದರೋ ಆ ರೀತಿಯಲ್ಲೇ ಇಂದಿನ ಅಲಂಕಾರ, ತಲೆಗೆ ಕಿರೀಟವಿಲ್ಲ, ಒಡಲ ಮೇಲೆ ಒಡವೆಗಳಿಲ್ಲ, ತಲೆಯ ಮೇಲೆ ಮಾತ್ರ ಚಂದನದ ವಲಯವಿದೆ. ಎದೆಯ ಮೇಲೆ ಮುಗಿದ ಕೈಯಿದೆ. ಈ ಮೋಹಕವಾದ ಮೂರ್ತಿ ಮನಬಂದಾಗ ನನ್ನ ಕಣ್ಣಿಗೆ ಗೋಚರವಾಗುವಂತೆ ನಾನು ಈ ಪಲ್ಲಕ್ಕಿಯ ಕೊಂಬನ್ನು ಹಿಡಿದುಕೊಂಡು ಪ್ರಾಕೃತನಂತೆ ನಡೆಯುತ್ತಿದ್ದೇನೆ. ಪಲ್ಲಕ್ಕಿಯಲ್ಲಿ ಕೈಮುಗಿದುಕೊಂಡು ಕುಳಿತು ಈ ಸಂಯಮಿವರ್ಯರು ಎಲ್ಲದಿಸೆಗಳನ್ನು ನಿರುಕಿಸುತ್ತಾ ಸಕಲ ಸೃಷ್ಟಿಗೂ ಮೋಹಗೊಳ್ಳುತ್ತಾ ಭಗವಂತನ ವಿಶ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವಂತೆ ನನಗೆ ತೋರುತ್ತದೆ. ಈ ರೂಪಕ್ಕೆ ಬರಿ ಸೌಮ್ಯತೆಯಿಲ್ಲ. ಭೀಷಣತೆಯೂ ಉಂಟು, ಎಂಬಂತೆ ಈಶಾನ್ಯದಲ್ಲಿ ಮಿಂಚುತ್ತಿದೆ. ಮೋಡ ಗುಡುಗಿ ಗರ್ಜಿಸುತ್ತಿದೆ. ಅದಕ್ಕೂ ಆಚಾರ್ಯರ ಅಂಜಲಿ" "ಅವರು ಉದ್ಧರಿಸಿದ ಊರಿದು ಹದಿನಾಲ್ಕು ವರ್ಷಗಳ ಕಾಲ ತಮ್ಮ ಯೌವನದ ದೆಸೆಯಲ್ಲಿ ಇಲ್ಲಿ ಇದ್ದು ಶ್ರೀ ಭಾಷ್ಯವನ್ನು ಉಪದೇಶಿಸಿದ ಕ್ಷೇತ್ರ. ಅವರ ಆತ್ಮ ಈ ನಾರಾಯಣ. ಕಣಸು ಈ ಶಲ್ವಪಿಳ್ಳೆ ಇಂಥ ಸಾನ್ನಿಧ್ಯದಲ್ಲಿ ನಾನು ತಣ್ಣಗಿರುವುದು ಹೇಗೆ ಸಾಧ್ಯ? ಆ

---

[1] ತಿರುನಕ್ಷತ್ರ ಪು. 101

[*] ರಾಮಾನುಜಾಚಾರ್ಯರ ತಿರುನಕ್ಷತ್ರ ಮೇಷಮಾಸದಲ್ಲಿ ಬರುತ್ತದೆ. ಎಲ್ಲಾ ಶ್ರೀ ವೈಷ್ಣವ ಕ್ಷೇತ್ರಗಳಲ್ಲಿ ಈ ತಿರುನಕ್ಷತ್ರವನ್ನು ಆಚರಿಸುತ್ತಾರೆ. ಆದರ ಮೇಲುಕೋಟೆಯಲ್ಲಿ ಈ ಉತ್ಸವ ಹತ್ತುದಿನಗಳು ವೈಭೋವೋತವಾಗಿ ಜರಗುತ್ತದ. ಬೆಳಿಗ್ಗೆಯೆಲ್ಲಾ ಶ್ರೀವೈಷ್ಣವ ಸಂಪ್ರದಾಯದಂತೆ ಮಂತ್ರಗಳ ಆರಾಧನೆ ನಡೆದರೆ, ಸಂಜೆ ಪಲ್ಲಕ್ಕಿ ಉತ್ಸವ ನಡೆಯುತ್ತದೆ.

ತೇಜ ಹೊಳಪು ನನ್ನ ಮೇಲೆ ಬಿದ್ದರೆ ನಾನು ಜ್ವಲಿಸದೆ ಹೇಗೆ? ಶ್ರೀಮತೇ ರಾಮನುಜಾಯ ನಮಃ ಎಂದು ಸ್ಮರಿಸುತ್ತಾರೆ.[1]

ಈ ಮಾತುಗಳನ್ನು ಗಮನಿಸಿದರೆ ಸಾಕು ಪು.ತಿ.ನರು ದೈವದಷ್ಟೆ ಮನ್ನಣೆಯನ್ನು ರಾಮಾನುಜರಿಗೆ ನೀಡುತ್ತಿದ್ದರು ಎನ್ನುವುದು. ಅದರಿಂದ ಪಡೆಯುವ ಆನಂದ, ಅವರ ಮೂರ್ತಿಯ ನೆನಪು ಸದಾ ಕಾಲ ತಮಗೆ ಸ್ಫೂರ್ತಿದಾಯಕ ಎನ್ನುತ್ತಾರೆ. ಇಂತಹ ಮಾತುಗಳು ಓದುಗನ ಮನಸ್ಸಿನಲ್ಲೂ ಒಂದು ದೈವಿಕ ಭಾವನೆಗಳನ್ನು ಉಂಟುಮಾಡುತ್ತದೆ. ಇವರ ಇಂತಹ ದೈವಿಕ ತತ್ತ್ವ ಭಾವನೆಗಳ ಸಾಹಿತ್ಯ ಆಧುನಿಕತೆಗೆ ಮಾರು ಹೋಗಿ ಹಿಂತಿರುಗಲಾಗದೇ ಬಳಲುತ್ತಿರುವ ಮನಸ್ಸಿಗೆ ಒಂದು ಶಾಂತಿಧಾಮವಿದ್ದ ಹಾಗೆ ಎನ್ನಬಹುದು. ಒಂದು ಸಂಸ್ಕೃತಿಯ ಪುನರ್‌ಮೌಲ್ಯಿಕರಣ ಇಂತಹ ಸಾಹಿತ್ಯದಿಂದಲೇ ಆಗುವುದು.

ರಾಮಾನುಜಾಚಾರ್ಯರ ಅಂಜಲಿ ಮುದ್ರೆಯನ್ನು ಕುರಿತು ಈ ರೀತಿ ಹೇಳುತ್ತಾರೆ. ದೇವರನ್ನು ಎಲ್ಲೆಲ್ಲಿಯೂ ಕಂಡ ಮಹಾತ್ಮರಿಗೆ ಈ ಅಂಜಲಿಯ ವಿನಯ ಸಹಜವಾದುದು ತಾನೇ ಇಲ್ಲಿ ನೋಡು, ಈ ಕರ್ಮಯೋಗಿ ನಿನಗೂ ಕೈಮುಗಿಯುತ್ತಾರೆ, ನನಗೂ ಕೈಮುಗಿಯುತ್ತಾರೆ ಯ:ಕಶ್ಚಿತನಿಗೂ ಇವರ ಅಂಜಲಿ, ಈ ವಿನಯಕ್ಕೆ ಮಣಿಯದವರಾರು? ಕಿರಿಯದರಲ್ಲಿ ಹಿರಿಯದನ್ನು ಕಾಣುವ, ಕಂಡು ಬೆರಗುಗೊಳ್ಳುವ ಮಹಾತ್ಮರ ರೀತಿ ಇಂಥದ್ದು. ತಾವು ಕಂಡ ತತ್ವದಂತೆ ಆಚರಣೆಯೂ ಕೂಡ. ಚಿದಚಿದ್ವಿಶಿಷ್ಟ ಪರಾತ್ಪರ ವಸ್ತು ಸರ್ವಾಧಾರ ಸರ್ವಾಂತರ್ಯಾಮಿ ನಿನಗೆ ನಮೋ ಎನ್ನುತ್ತದೆ. ಈ ಮಹಾನುಭಾವನ ಅಂಜಲಿ[2]

ಅವರ ಮುದ್ರೆಯು ಸಾರುವ ನೀತಿ ಜಗತ್ತಿನ ಎಲ್ಲಾ ವಸ್ತುಗಳನ್ನೂ ಸಮಾನದೃಷ್ಟಿಯಲ್ಲಿ ನೋಡುವುಂತಹುದು. ಇದೇ ಸರ್ವಧರ್ಮನೀತಿ. ಪ್ರಪಂಚ ಯಾವ ಶಾಂತಿಯನ್ನು ಬೇಡುತ್ತಿದ್ದೆಯೋ ಅದಕ್ಕೆ ಪರಿಹಾರ ಈ ಅಂಜಲಿ ಮುದ್ರೆಯಲ್ಲಿದೆ ಇದೆ ಎನ್ನುವುದನ್ನು ಕಾಣಬಹುದು. ಸಂಸ್ಕೃತಿ ದರ್ಶನವಾಗುವುದು ಇಂತಹ ದಾರ್ಶನಿಕರಿಂದ ಎಂಬುದು, ಇವುಗಳಿಂದ ನಮಗೆ ಮನನವಾಗುವುದನ್ನು ಇಲ್ಲಿ ಗಮನಿಸುತ್ತಾ ಹೋಗಬಹುದು.

ಭವವಿದನು ಪರಮಾತ್ಮಲೀಲೆಯೆಂದನುಭವಿಸಿ
ಪ್ರಾಪ್ತಕರ್ಮದೊಳಾತನಿಚ್ಛೆಯನೆ ಗುರುತಿಸುವ
ಆಪ್ತಕಿಂಕರನಂತೆ ವರ್ತಿಸಿದ ಧೀಮಂತ,
ಶಿವಸಂಗಿ, ಸರ್ವಸಂಗತ್ಯಾಗಿ, ಹರಿಭೋಗಿ,
ರಾಮಾನುಜಾ, ನಿನ್ನ ನೆನೆವಾವನಿಗೆ ಹೊರತು
ದೈವವತ್ಸಲತೆ?

---

[1] ತಿರುನಕ್ಷತ್ರ : ಪುಟ – 102-103

[2] ಶ್ರೀಮತೇ ರಾಮಾನುಜಾಯನಮಃ ಪು.223

ಆರದವೃತಾನಂದದಾಸೆ ಕೊನರಿಡುವುದ್ಯೆ ಜೀವಕಲ್ಪಲತೆ[1]

ಈ ಕವನ ರಾಮಾನುಜರ ಮೇಲಿರುವ ಶ್ರದ್ಧೆಭಕ್ತಿಗಳನ್ನು ತೋರಿಸುತ್ತದೆ. ಯಾರು ರಾಮಾನುಜರನ್ನು ಭಕ್ತಿಯಿಂದ ನೆನೆಯುತ್ತಾರೋ, ಅಂತಹವರಿಗ ದೈವಪ್ರೀತಿಯೂ ತಾನಾಗೇ ಸಿಗುವುದೆಂಬ ನಂಬಿಕೆಯನ್ನು ಇಲ್ಲಿಗಮನಿಸಬಹುದು. ಪು.ತಿ.ನರು ಹೇಗೆ ರಾಮಾನುಜರ ಮೇಲಿನ ಶ್ರದ್ಧೆ, ಭಕ್ತಿಯನ್ನು ವ್ಯಕ್ತಪಡಿಸುತ್ತಾರೋ, ಅಂತಹ ಭಕ್ತಿ, ಶ್ರದ್ಧೆಗಳನ್ನು ಆಳ್ವಾರರುಗಳ ಮೇಲೂ ವ್ಯಕ್ತಪಡಿಸುತ್ತಾರೆ. ಹನ್ನೆರಡೂ ಜನ ಆಳ್ವಾರರೂ 4 ಜನ ಆಚಾರ್ಯರ ಬಗ್ಗೆ ಶ್ರಿವೈಷ್ಣವರ ನಿಷ್ಠೆಯಂತೆಯೇ ತಮ್ಮ ನಂಬಿಕೆಗಳನ್ನು ವ್ಯಕ್ತಪಡಿಸುತ್ತಾರೆ. ಮೇಲುಕೋಟೆಯಲ್ಲಿ ನಡೆಯುವ 'ಕೊಠಾರೋತ್ಸವ' ಆಳ್ವಾರುಗಳಿಗಾಗಿಯೇ ನಡೆಯುವ ಉತ್ಸವ. ಕೊಠಾರೋತ್ಸವ ಧನುರ್ಮಾಸದ ಕೊನೆಯ ಹತ್ತು ದಿನಗಳಲ್ಲಿ ನಡೆಯುವ ಉತ್ಸವ, ಮೇಲುಕೋಟೆಯ ದೇವಾಲಯದಲ್ಲಿರುವ ನಾರಾಯಣಸ್ವಾಮಿಯ ನವರಂಗದಲ್ಲಿ ಹನ್ನೆರಡು ಜನ ಆಳ್ವಾರರಿಗೂ, ಆಚಾರ್ಯರುಗಳಿಗೂ ನಡೆಯುವಂತಹ ಉತ್ಸವವಿದು. ಇಲ್ಲಿನ ವಿಶೇಷತೆ ಎಂದರೆ ಒಬೊಬ್ಬ ಆಳ್ವಾರರಿಗೂ ಕ್ರಮದಂತೆ ಮಾರ್ಯಾದೆಯನ್ನು ಸಲ್ಲಿಸಿ ಉತ್ಸವವನ್ನು ನಡೆಸುವಂತಹುದು, ಈ ಉತ್ಸವದ ಮೆರವಣಿಗೆ ದೇವಾಸ್ಥಾನದ ಚತುಷ್ಪಥದಲ್ಲಿ ನಡೆಯುತ್ತದೆ. ಜೊತೆಗೆ ಇದು ಒಂದ ರೀತಿಯ ಸಾಂಸ್ಕೃತಿಕ ಉತ್ಸವ. ಪ್ರತಿ ದಿವಸ ಈ ಆಳ್ವಾರರ ಮುಂದೆ ಸಂಗೀತ ಕಛೇರಿಗಳನ್ನು ನಡೆಸುತ್ತಾರೆ. ಈ ಕೊಠಾರೋತ್ಸವ ಭಾವುಕರಿಗೆ ಬಹುರಮಣೀಯವಾದ ಉತ್ಸವವೆನ್ನುತ್ತಾರೆ ಪು.ತಿ.ನರವರು.

ಇಂತಹ ಉತ್ಸವ ಆನಂದವನ್ನು ಆಳ್ವಾರರ ಕೃತಿಗಳ ವೈಶಿಷ್ಟ್ಯವನ್ನು ಹೀಗೆ ಹಂಚಿಕೊಳ್ಳುತ್ತಾರೆ. ಆಳ್ವಾರುಗಳಿಗೆ ತನ್ನನ್ನು ಗಾಢವಾಗಿ ಹೊಕ್ಕು ಅನುಭವಿಸಿ ಆನಂದಿಸುವ ಸಾಮರ್ಥ್ಯವನ್ನು ಕೊಟ್ಟು ನಿಮಗೆ ಅದನ್ನು ಉಳಿಸಿಕೊಂಡು ವ್ಯಾಖ್ಯಾನಿಸಿ, ಗುಡಿ ಮತ್ತು ಮನೆಗಳ ಕಲ್ಪನೆಗಳಲ್ಲಿ ಜೀವಂತವಾಗಿರಿಸಿಕೊಳ್ಳುವ ಬುದ್ಧಿಯನ್ನು ಕೊಟ್ಟಿದ್ದಾನೆ[2] ಎನ್ನುತ್ತಾರೆ ಪು.ತಿ.ನರ ಗೆಳೆಯ ಶಿವ. ಈ ಮಾತುಗಳು ಆಳ್ವಾರರ ಪ್ರಬಂಧಗಳನ್ನು ಕುರಿತು ಹೇಳುವಂತಹ ಮಾತು. ಈ ನಾಲಾಯಿರ ಪ್ರಬಂಧಗಳು ಈಗಲೂ ವೇದ, ಉಪನಿಷತ್ತಿನ ಸಮನಾಗಿ ಗೌರವವನ್ನು ಪಡೆದಿದೆ. ಈ ಪ್ರಬಂಧಗಳೇ ಶ್ರಿವೈಷ್ಣವರ ಮನೆಯ ಮಹಾಗ್ರಂಥಗಳು ಎನ್ನಬಹುದು. ಇದು ಉಳಿದಿರುವುದೇ ಇಂತಹ ಸಂಸ್ಕೃತಿನಿಷ್ಠ ಸಂಪ್ರದಾಯಸ್ಥ ಮನೆತನದಲ್ಲಿ ಎಂಬ ಅನಿಸಿಕೆ ವ್ಯಕ್ತವಾಗುತ್ತಿರುವುದನ್ನು ಕಾಣಬಹುದು.

ಶ್ರಿವೈಷ್ಣವ ಮತಸ್ಥರು ರಾಮಾನುಜಾಚಾರ್ಯರನ್ನು ತಮ್ಮ ದೈವವೆಂದು ಬಗೆದು ಅವರಿಗೆ ಭಕ್ತಿ ಗೌರವ ಶ್ರದ್ಧಾಭಾವಗಳನ್ನು ತೋರಿಸುತ್ತಾರೆ. ಅವರ ಪರಮ ಶಿಷ್ಯನಾದ ಕೂರತ್ತಾಳ್ವಾರ್ ರಾಮಾನುಜರನ್ನು "ದಯೈಕ ಸಿಂಧು" ಎಂದು ಬಣ್ಣಿಸುತ್ತಾರೆ.

---

[1] ರಾಮಾನುಜ : ಸ. ಕವನಗಳು ಪು : 440

[2] ಔತಣ-ಬೀಳ್ಕೊಡಿಗೆ ಪು: 255

"ಯೋ ನಿತ್ಯಮಚ್ಯುತ ಪದಾಂಬುಜಯುಗ್ಮರುಕ್ಮ
ವ್ಯಾಮೋಹತ ಃ ತದಿತ ರಾಣಿ ತೃಣಾಯಮೇನೇ
ಅಸ್ಮದ್ಗುರೋ ಃ ಭಗವತೊಸ್ಯದಯ್ಯೆಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ.

ಶ್ರೀ ಭಗವದ್ರಾಮಾಜರು ಅಚ್ಯುತನ ಎರಡು ಪಾದ ಪದ್ಮಗಳೆಂಬ ಚಿನ್ನದ ಎದುರಿಗೆ ಮಿಕ್ಕುದೆಲ್ಲವನ್ನೂ ತೃಣವೆಂದು ಭಾವಿಸಿದ್ದರು. ಅಂತಹ ದಯ್ಯೆಕ ಸಿಂಧುವಾದ ನನ್ನ ಗುರುವಿನ ಎರಡು ಪಾದಗಳಿಗೆ ಶರಣಾಗುತ್ತೇನೆ[1]

ಖಖ❖ಛಛ

[1] ಕನ್ನಡ ನಾಡಿನಲ್ಲಿ ರಾಮಾನುಜರು, ಜಿ.ಪಿ.ರಾಜರತ್ನಂ ಪ್ರ.ಹೆಬ್ಬಾರ್ ಶ್ರಿವೈಷ್ಣವ ಸಭಾ ಪು:13

## ಶ್ರಿವೈಷ್ಣವ ಪಾಕದರ್ಶನ

ನಾನಾ ದೇಶ, ನಾನಾ ವೇಷ, ನಾನಾ ಭಾಷೆ, ನಾನಾ ಧರ್ಮ, ನಾನಾ ವರ್ಣ, ನಾನಾ ಸಂಸ್ಕೃತಿಗಳ ಸಾರವೇ ಪ್ರಪಂಚ. ನಾನಾ ವಿಭಿನ್ನತೆಯನ್ನು ಕಾಣಲು ಮನುಷ್ಯವರ್ಗದ ಪ್ರಯತ್ನವನ್ನು ಕಾಣುತ್ತೇವೆ. ಆದರೆ ಪ್ರಪಂಚ ರಸಮಯವಾಗಿರಬೇಕಾದರೆ ಸಮಾನತೆಗೆ ವಿವಿಧತೆಗಳಿರಬೇಕು. ಎಲ್ಲವೂ ಸಮಾನವಾಗಿದ್ದರೆ ಮನುಷ್ಯನಿಗೆ ಆನಂದ ಮೂಡುವುದು ಹೇಗೆ. ಆದ್ದರಿಂದಲೇ ವಿವಿಧತೆಯಲ್ಲಿ ಏಕತೆ ಇರಬೇಕು ಎನ್ನುವುದು.

ಈ ಭಾರತದ ವಿಷಯಕ್ಕೆ ಬಂದರೆ ಇಲ್ಲಿ ಸಿಗುವುದು ವಿವಿಧತೆಯೆ. ಧರ್ಮ, ಜಾತಿ, ಅಲಂಕಾರ, ಭಾಷೆ, ವೇಷ, ಎಲ್ಲದರಲ್ಲೂ ವಿವಿಧತೆಯೆ. ಈ ವಿವಿಧತೆ ಎಲ್ಲಾಕ್ಷೇತ್ರಗಳಲ್ಲೂ ಇದೆ. ಇದೇ ಮನುಷ್ಯನ ಬಾಳಿನ ವೈವಿಧ್ಯತೆಗೆ ಸಾಕ್ಷಿ, ಎಲ್ಲಾ ವಿಷಯದಲ್ಲಿ ವೈವಿಧ್ಯತೆ ಇರುವಂತೆ ಪಾಕ ಶಾಸ್ತ್ರದಲ್ಲಿ ಭಾರತದ ನಾವೀನ್ಯತೆ ಎದ್ದು ಕಾಣುತ್ತದೆ. ಎಷ್ಟು ಜಾತಿಗಳು ಈ ಭಾರತದಲ್ಲಿ ನೆಲೆನಿಂತಿದೆಯೋ, ಅಷ್ಟೇ ರೀತಿಯ ಆಹಾರಗಳು ಬಳಕೆಯಲ್ಲಿವೆ. ಪ್ರತಿಯೊಂದು ಜಾತಿವಾರು ಸಂಘಟನೆಗಳು, ಪ್ರತಿಯೊಂದು ರಾಜ್ಯಗಳು, ಪ್ರತಿಯೊಂದು ಜಿಲ್ಲೆಗಳು, ತನ್ನದೇ ಆದ ಪಾಕ ವೈಶಿಷ್ಟ್ಯಗಳನ್ನು ಪಡೆದಿವೆ.

ಕರ್ನಾಟಕವು ತನ್ನ ಪಾಕ ಪ್ರಾವಿಣ್ಯತೆಯಿಂದ ಪ್ರಪಂಚದಲ್ಲೆಲ್ಲಾ ಮನೆ ಮಾಡಿದೆ. ಕರ್ನಾಟಕದ 'ಇಡ್ಲಿ' ದೇಶ ವಿದೇಶಗಳಲ್ಲೂ, ಅದೇ ಹೆಸರಿನಲ್ಲಿ ಉಳಿದು ಪ್ರಸಿದ್ಧ ತಿನಿಸಾಗಿರುವುದನ್ನು ಕಾಣಬಹುದು. ಹಾಗೆಯೇ ಒಬ್ಬಟ್ಟು, ರಾಗಿಮುದ್ದೆ, ಉಪ್ಪುಎಸರು ಇವೆಲ್ಲವೂ ದೇಶಿ ತಿನಿಸುಗಳು ಎನ್ನಬಹುದು. ಹಾಗೆಯೇ ಇಲ್ಲಿನ ಪ್ರತಿಯೊಂದು ಜಾತಿವಾರು ಸಂಘಟನೆಗಳು ತಮ್ಮದೇ ಆದ ವಿಶಿಷ್ಟ ಆಹಾರ ಪದ್ಧತಿಯನ್ನು ಒಳಗೊಂಡಿದೆ. ಇವರಲ್ಲಿ ಶ್ರಿವೈಷ್ಣವರೂ ಒಬ್ಬರು. ಶ್ರೀವೈಷ್ಣವರು ತಮ್ಮನ್ನು ಅಯ್ಯಂಗಾರರು ಎಂದು ಕರೆದುಕೊಳ್ಳುತ್ತಾರೆ. ಇವರ ಆಹಾರ ತಿನಿಸುಗಳು ಇತರ ವರ್ಗಗಳಿಗಿಂತ

ವಿಭಿನ್ನವಾಗಿ ವೈಶಿಷ್ಟವಾಗಿಯೇ ಇದೆ. ಅಯ್ಯಂಗಾರ್ ವರ್ಗದಲ್ಲಿ ವಿಶೇಷವಾಗಿರುವ ಪಾಕದ ಅರಿವು ನಮ್ಮ ಪು.ತಿ.ನ ಸಾಹಿತ್ಯದಲ್ಲಿ ಹೇಗೆ ಕಾಣುತ್ತದೆ ಎಂಬುದನ್ನು ನೋಡಬಹುದು.

ಈ ಜಾತಿವಾರು, ಧರ್ಮಗಳ ಆಹಾರವನ್ನು ಆಲೋಚಿಸುವಾಗ ಪು.ತಿ.ನ ಈ ರೀತಿ ಹೇಳುತ್ತಾರೆ. ಭಾರತದಲ್ಲಿ ಎಷ್ಟು ಮತಗಳಿವೆ, ಅಷ್ಟು ಸಂಸ್ಕೃತಿಗಳಿವೆ, ಅಷ್ಟು ಜನಾಂಗಗಳಿವೆ! ದ್ವೈತಕ್ಕೂ ವಿಶಿಷ್ಟಾದ್ವೈತಕ್ಕೂ, ಅದ್ವೈತಕ್ಕೂ ಈ ಹಿಂದಿನಷ್ಟೂ ಸ್ಪರ್ಧೆಯಿಲ್ಲ, ಗೊತ್ತೆ? ಪರಸ್ಪರವಾದ ಅಡಿಗೆಗಳ ವಿನಿಮಯ ಈಗ ಈ ಮತಸ್ಥ ಯುವ ಜನಕ್ಕೆ ಸಾಧ್ಯ ಅದರಿಂದ ಈ ಮತಗಳ ವ್ಯತ್ಯಾಸವನ್ನು ಆಯಾ ಬ್ರಹ್ಮಸೂತ್ರ ಭಾಷೆಗಳಿಂದ ಅಳೆಯುವುದು ಮಂಕುತನ. ಇವುಗಳ ಮಾನದಂಡ ಆಂಬೊಡೆ, ಪುಳಿಯೋಗರೆ, ಮತ್ತು ಹೋಳಿಗೆ. ಆಯಾ ಮತಗಳ ವೈಶಿಷ್ಟ್ಯ ಈ ಖಾದ್ಯ ವಸ್ತುಗಳಲ್ಲಿ ಅಡಗಿದೆಯೇ ಹೊರತು ಆಯಾ ಸಿದ್ಧಾಂತಗಳಲ್ಲ ಈ ಭೋಜನ ದೃಶ್ಯಗಳ ಪರಸ್ಪರಾಕರ್ಷಣೆಯಿಂದ ಈಗಿನ ತ್ರಿಮಸ್ಥರಿಗೆ ಸೌಹಾರ್ದ ಸೌಮನ್ಯತಗಳು ಏರ್ಪಟ್ಟಿವೆಯೇ ವಿನಾ ತತ್ವಗಳ ಸಮನ್ವಯದಿಂದಲ್ಲ[1]

ಇಂತಹ ವಿಚಾರ ಪ್ರಣಾಳಿಕೆ ಒಬ್ಬ ಸಮನ್ವಯ ಕವಿಯಲ್ಲಿ ಮಾತ್ರ ಮೂಡಿ ಬರಲು ಸಾಧ್ಯ, ಪು.ತಿ.ನರಿಗೆ ಇಂತಹ ಸಮನ್ವಯತೆ ಅವರ ಧರ್ಮದ ಸಂಸ್ಕೃತಿಯ ಮುಖಾಂತರ ಬಂದಿರುವಂತಹ ದರ್ಶನ. ಒಬ್ಬ ಸುಸಂಸ್ಕೃತ ಆಲೋಚಿಸುವ ಮಾರ್ಗವನ್ನು ಈ ಮಾತುಗಳು ಸೂಚಿಸುತ್ತವೆ ಎಂಬುದನ್ನು ನಾವು ಮನಗಾಣಬಹುದು.

ಪು.ತಿ.ನ ಅವರು ಶ್ರಿವೈಷ್ಣವ ತತ್ವಸಿದ್ಧಂತದ ವಕ್ತಾರರು ಮಾತ್ರವಲ್ಲ. ಆಹಾರಗಳ ಬಗ್ಗೆ ಅಪಾರ ತಿಳುವಳಿಕೆಯುಳ್ಳ, ಹಾಗೂ ಅದನ್ನು ಸವಿಯುವ ರಸಿಕ ಮನಸ್ಸುಳ್ಳವರೂ ಆಗಿದ್ದರು ಎಂಬುದು ಅವರ ಅನೇಕ ಲೇಖನಗಳಿಂದ ತಿಳಿಯುತ್ತದೆ. ಹಾಗೆಯೇ ನಮ್ಮ ಹಲವು ಲೇಖಕರಿಗೆ ಅವರ ಭೋಜನ ಪ್ರಿಯತೆಯ ಅರಿವು ಆಗಿದ್ದು ಅದರ ಅನುಭವವನ್ನು ಬಹಳ ವೈಶಿಷ್ಟ್ಯಪೂರ್ಣವಾಗಿ ಹೇಳುತ್ತಾರೆ. ಒಮ್ಮೆ ಲಕ್ಷ್ಮಿನಾರಾಯಣ ಭಟ್ಟರ ಮನೆಗೆ ತೀ.ನಂ.ಶ್ರೀ ಮತ್ತು ಪು.ತಿ.ನ ರವರನ್ನು ಊಟಕ್ಕೆ ಆಹ್ವಾನಿಸಿದ್ದರಂತೆ, 12 ಗಂಟೆಗೆ ಊಟಕ್ಕೆ ಬರಬೇಕಾದ ಇವರು 10 ಗಂಟೆಗೆ ಬಂದರಂತೆ. ಆದ್ದರಿಂದ ಅವರ ಹೆಂಡತಿಗೆ ಬೇಗ ಬೇಗ ಅಡುಗೆಯನ್ನು ಮಾಡಲು ಹೇಳಿ ಸಿಹಿಯನ್ನು ಹೋಟೆಲಿನಿಂದ ತಂದು ಬಿಟ್ಟರಂತೆ. ಊಟವನ್ನು ಮಾಡುವಾಗ ಇಬ್ಬರೂ ಅಡುಗೆಯನ್ನು ಬಾಯ್ತುಂಬ ಹೊಗಳಿದರಂತೆ, ನಂತರ ಸಿಹಿಯಾದ ಮೈಸೂರು ಪಾಕನ್ನು ಬಡಿಸಿದಾಗ ತೀ.ನಂ.ಶ್ರೀಯವರು ಅದನ್ನು ದುರುಗುಟ್ಟು ನೋಡಿ ಇದು ಮನೆಯಲ್ಲಿಯೇ ಆದದ್ದಾ? ಎಂದು ಕೇಳಿದಾಗ ಇವರು 'ಹೌದು ಸಾರ್, ಅಂದರಂತೆ,

ತೀ.ನಂ.ಶ್ರೀ ಸಂತೋಷದಿಂದ 'ಜಾಣೆ ಕಣಮ್ಮ ಹೋಟೆಲಿನಲ್ಲಿ ಮಾಡಿದ್ದು ಅನಿಸೋಹಾಗಿದೆ ನೋಡು' ಎಂದರಂತೆ, ತಕ್ಷಣವೇ ಪು.ತಿ.ನ ಏನು ಶ್ರೀಕಂಠಯ್ಯ ನೀನು ಹೇಳೋದು? ನೋ, ನೋ ನಾನು ನಿನ್ನ ಮಾತು ಒಪ್ಪೊಲ್ಲ. ಈ ಆಂಬೊಡೆ ನೋಡು ಹೇಗೆ ಗರಿಗರಿ ಮುರಿಯುತ್ತೆ! ಈ ಪಾಯಸ ನೋಡು ಎಷ್ಟು ಸವಿ! ಮೈಸೂರು ಪಾಕಿನ ಮೂತಿ ತಿವಿಯೋ ಹಾಗಿಲ್ಲವ ಇದು? ನೀ ಏನೇ ಹೇಳು ಉಳಿದ ಅಡಿಗೆ ಗುಂಪಿಗೆ ಸೇರೋ

---

[1] ಮಸಾಲೆ ದೋಸೆ – 131

ಯೋಗ್ಯತೆ ಅದಕ್ಕಿಲ್ಲ. ಇದೇ ಬೇರೆ, ಅದೇ ಬೇರೆ. ಎಲ್ಲಮ್ಮ ಇನ್ನೆರಡು ಆಂಬೊಡೆ ಹಾಕು, ಎರಡು ಸೌಟು ಪಾಯಸ ಬಡಿಸು ಎಲಾ ಕವಿ! ಅಂದುಕೊಂಡೆ ನಾನು. ಮೈಸೂರು ಪಾಕು ಹೊರಗಿನದು ಎಂದು ಎಷ್ಟು ಕರಾರುವಕ್ಕಾಗಿ ನಯವಾಗಿ ತೀರ್ಮಾನಿಸಿಬಿಟ್ಟರು[1]

ಈ ಸನ್ನಿವೇಶ ಪು.ತಿ.ನ ರವರಿಗೆ ಆಹಾರ ವಿಷಯದಲ್ಲಿಯೂ ಎಂತಹ ಶ್ರದ್ಧೆಯಿತ್ತು ಎನ್ನುವುದು ತಿಳಿಯುತ್ತದೆ. ಅಯ್ಯಂಗಾರರ ಮಾತೃಭಾಷೆ ತಮಿಳು. ಇವರ ಅನೇಕ ಭಕ್ಷ್ಯಗಳು 'ತಮಿಳು' ಭಾಷೆಯಲ್ಲಿ ಬಳಕೆಯಲ್ಲಿರುವ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಪು.ತಿ.ನ ಇದನ್ನು ತಮ್ಮ ಲೇಖನದಲ್ಲಿ ಬಳಸುವಾಗ ಅದನ್ನು ಕನ್ನಡಕ್ಕೆ ಅನುವಾದ ಮಾಡದೆ ಹಾಗೆಯೇ ಬಳಸುತ್ತಾರೆ. ಈ ಭಾಷೆಯ ಬಳಕೆಯ ಸಂತೋಷ ಇದರಿಂದಲೇ ಓದುಗನಿಗೆ ಸಿಗುತ್ತದೆ. ಇವರ ದೇವಾಲಯಗಳಿಗೆ, ಇವರ ವರ್ಗಕ್ಕೆ ಪ್ರಸಿದ್ದವಾದ 'ಪುಳಿಯೋಗರೆ' ಅತ್ಯಂತ ಪ್ರಸಿದ್ದ ವಿಶಿಷ್ಟ ತಿನಿಸು, ಇದನ್ನು ಹುಳಿಯನ್ನ ಎನ್ನುವುದಕ್ಕಿಂತ 'ಪುಳಿಯೋಗರೆ' ಎಂದರೆ ಇದರ ಸೊಗಸು ಹೆಚ್ಚು.

ಶ್ರಿವೈಷ್ಣವ ದೇವಾಲಯಗಳ ಪ್ರಸಿದ್ಧಿ ಒಂದು ಮೂರ್ತಿಗಳು, ಪಾಶುರಗಳು, ವೇದಘೋಷಗಳಿಗೆ ಸಂಬಂಧ ಪಟ್ಟಿದ್ದಾದರೆ, ಮತ್ತೊಂದು ಅಲ್ಲಿನ ಪ್ರಸಾದಗಳು ಇನ್ನೊಂದು ಬಗೆಯ ಪ್ರಸಿದ್ದಿಯನ್ನು ಪಡೆದಿವೆ. ಪ್ರಸಾದಗಳಲ್ಲಿ ಹೆಚ್ಚು ಬಳಕೆಯಾಗುವುದು 'ಪೊಂಗಲು', 'ಪುಳಿಯೋಗರೆ' 'ಕ್ಷೀರಾನ್ನ'* 'ಗರಗುವಡೆ'* 'ತುಣಿತೇಂಗೋಲು'* 'ಸಜ್ಜಪ್ಪ'* ಮುಂತಾದವು. ಈ ಪಾಕದರ್ಶನ ಅವರ ಲೇಖನಗಳಲ್ಲಿ ಅಲ್ಲಲ್ಲಿ ತೂರುತ್ತಲೆ ಇರುತ್ತವೆ.

"ನಾಣು ಇನ್ನೂ ಏನೇನೋ ಉತ್ಸವಗಳನ್ನೊ, ಪೊಂಗಲು, ಪುಳಿಯೋಗರೆಗಳನ್ನು ಬಣ್ಣಿಸಿ ನೀರೂರಿಸುತ್ತಿದ್ದಾನೆ"[2]

"ನಾಳೆ ತೊಟ್ಟಿಲ ಮಡುವಿನ ತೊರೆಗೆ ಸ್ನಾನಕ್ಕೆ ಹೋಗಬೇಕೆಂದು ಊರೆಲ್ಲಾ ಗುಂಪು ಗುಂಪಾಗಿ ಯೋಚಿಸುತ್ತಿದೆ. ಯಾರ ಯಾರ ಮನೆಯಲ್ಲಿ ಏನೇನು ಮಾಡಬೇಕೆಂದು ಸಲಹೆಗಳು ಬರುತ್ತಿವೆ ನಾನು ಹತ್ತು ಜನಕ್ಕೆ ಪೊಂಗಲಿಗೆ ಒಪ್ಪಿಕೊಂಡಿದ್ದೇನೆ"[3]

---

[1] ಸುತ್ತ ಸುಖದ ಅಲೆ ಅಬ್ಬಿಸಿದ ಯದುಗಿರಿಯ ವೀಣೆ : ಡಾ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ ಗ್ರಃ ನೂರರ ನೆನಪು, ಪು : 269

* ಕ್ಷೀರಾನ್ನ : ಹಾಲಿನಲ್ಲೆ ಅಕ್ಕಿಯನ್ನು ಬೇಯಿಸಿ ಸಕ್ಕರೆ ತುಪ್ಪ, ಕೇಸರಿ, ಏಲಕ್ಕಿ ಪುಡಿಗಳನ್ನು ಹಾಕಿ ಮಾಡಿದ ಸಿಹಿ ಭಕ್ಷ್ಯ.

* ಗರಗುವಡೆ : ತೆಂಗಿನ ತಾಯಿಯನ್ನು ರುಬ್ಬಿ ಅಕ್ಕಿಹಿಟ್ಟನ್ನು ಮೆಣಸಿನಕಾರ, ಉಪ್ಪು, ಇಂಗನ್ನು ಮಿಶ್ರಣ ಮಾಡಿ, ಎಣ್ಣೆಯಲ್ಲಿ ಕರಿಯುವುದು.

* ತುಣಿತೇಂಗೋಲು: ಉದ್ದಿನ ಬೆಳೆಯನ್ನು ರುಬ್ಬಿ, ಅದನ್ನು ಜಹಾಂಗೀರನ್ನು ಮಾಡುವ ಆಕಾರದಲ್ಲಿನ ಬಟ್ಟೆಯಿಂದ, ಎಣ್ಣೆಯಲ್ಲಿ ಬಿಟ್ಟು ಅದರ ಮೇಲೆ ಸಕ್ಕರೆಯ ಮಿಶ್ರಣ ಮಾಡಿದ ಸಿಹಿಪದಾರ್ಥ. ಶ್ರಿವೈಷ್ಣವರೆಗೆ ಮಾತ್ರ ತಿಳಿದಿರುವ ವಿಶಿಷ್ಟತಿನಿಸು.

* ಸಜ್ಜಪ್ಪ : ತೆಂಗಿನ ಕಾಯಿ ತುರಿ, ಕೊಬ್ಬರಿ ತುರಿ, ರವೆಯನ್ನು ಬೆಲ್ಲದ ಪಾಕದಲ್ಲಿ ಸಮಮಿಶ್ರಣಮಾಡಿ ಹೂರಣವನ್ನು ತಯಾರಿಸಿ, ಮೈದಾ ಮತ್ತು ರವೆಯಿಂದ ಕಲಸಿದ ಕನಕದ ಮಧ್ಯದಲ್ಲಿಟ್ಟು ಎಣ್ಣೆಯಲ್ಲಿ ಕರಿಯುವ ಸಿಹಿ ಪದಾರ್ಥ.

[2] ಪು. 34 ವೈಲ್‌ಮಾಳಿಗೆ ಉತ್ಸವ

[3] ಮಳೆ – 39

"ಇನ್ನೂ ಈ ದೇವಾಸ್ಥಾನದಲ್ಲಿ ಕುಳಿತು ಪೊಂಗಲಿಗೂ, ತೇಂಗೋಲಿಗೂ ಕಾದು ಪ್ರಯೋಜನವಿಲ್ಲ"[1]

"ನನಗೆ ದೇವಸ್ಥಾನದಲ್ಲಿ ಹೆಚ್ಚು ಮೋಹಕವಾದದ್ದು ಮೂಲದೇವರ ಪ್ರತಿಮೆ, ಚೆಲುವರಾಯನ ಉತ್ಸವ – ಉತ್ಸವಾಂತ್ಯದಲ್ಲಿ ದೊರಕುವ ಪೊಂಗಲು, ಪುಳಿಯೋಗರೆ"[2]

"ಮಡಿಕೆಯಲ್ಲಿ ಎಸರಿಟ್ಟು ಮಾಡಿದ ಬೇಳೆಹುಳಿ, ನಮ್ಮೂರಿಗೆ ವಿಶಿಷ್ಟವಾದ ಚಟ್ನಿ, ಪಡುವಲ ಕಾಯಿ, ಕಡ್ಲೆಬೇಳೆ ಪಾಯಸ, ದಧ್ಯನ್ನ ಇಷ್ಟನ್ನು, ಅಲ್ಲೇ ಒಲೆಹಚ್ಚಿ ಬೇಯಿಸಬೇಕೆಂಬ ಏರ್ಪಾಟು ನಡೆದಿತ್ತು.[3]

ಹೀಗೆ ಪು.ತಿ.ನರ ಸಾಂಸ್ಕೃತಿಕ ದರ್ಶನದ ಜೊತೆಗೆ ಅವರ ಪಾಕದರ್ಶನವೂ ನಮಗೆ ಅವರ ಪ್ರಬಂಧಗಳಲ್ಲಿ ಪರಿಚಯವಾಗುತ್ತದೆ. ಒಬ್ಬ ಕವಿಯ ಮನಸ್ಸು ಎಲ್ಲಾ ರೀತಿಯಿಂದಲೂ, ಎಲ್ಲಾ ಕಡೆಯಿಂದಲೂ ಪ್ರಭಾವಗೊಂಡು, ಆ ಅನುಭವಗಳು ಸಾಹಿತ್ಯದ ಮೂಲಕ ಹೊರಬರುವುದು ಅವನ ಸೃಜನಶೀಲತೆಗೆ ಸಾಕ್ಷಿಯಾಗುತ್ತದೆ. ಅಂತಹ ಸೃಜನ ಶೀಲ, ಸಾಂಸ್ಕೃತಿಕ ಪ್ರಭಾವದ ವ್ಯಕ್ತಿ ಪು.ತಿ.ನರದು ಎನ್ನಬಹುದು.

ಇವರ ಬೀದಿಯ ಬಸವ ಪ್ರಬಂಧ ಹಲಸಿನ-ಹಣ್ಣು ಮತ್ತು ಬಸವ ಇವರನ್ನು ಅದ್ಭುತವಾಗಿ ಚಿತ್ರಿಸುತ್ತವೆ. ಹಸಿವಾಗಿದೆ ಎಂದು ಹಲಸಿನ ಹಣ್ಣನ್ನು ಸುಲಿಯುತ್ತಾ ಇರುವ ಇಕ್ಕಟ್ಟಿನ ಸಂದರ್ಭವನ್ನು ಬಹಳ ರಸಮಯವಾಗಿ ಚಿತ್ರಿಸುತ್ತಾರೆ.

"ನಾನು ಹಣ್ಣನ್ನು ಸುಲಿದು ಕೀತನ್ನು ಮಾಡುತ್ತಾ ರಸತೊಟ್ಟಿಕ್ಕುತ್ತಿದ್ದರೂ ಕೊಬ್ಬರಿಯ ಹಾಗೆ ಮುರುವಾಗಿದ್ದ ತೊಳೆಗಳನ್ನು ಕಂಕರಿಗೆ ಹಾಕುತ್ತಿರುವಾಗ ಓಣಿಯ ಬಾಗಿಲು ತೆರೆದುಕೊಂಡು ಒಳಕ್ಕೆ ಒಂದು ಬಿಟ್ಟಿದ್ದಾನೆ ಬೀದಿಯ ಬಸವ. ಹಳಸಿನ ತೊಳೆಯ ಸ್ವಾದುತೆಯ ಸಂತೋಷದಲ್ಲಿ ನನಗೆ ಬಾಗಿಲು ಗಿರುಕೆಂದುದೂ ಬಸವ ಬಂದುದೂ ಗೊತ್ತಾಗಲಿಲ್ಲ". ಹಣ್ಣಿನ ಸ್ವಾದಕ್ಕಾಗಿ ಒಂದು ಕಡೆ ಪು.ತಿ.ನರವರೂ ಒದ್ದಾಡುತ್ತಿದ್ದರೆ ಬಸವ ಅದರ ಸಿಪ್ಪೆಗಾಗಿ ಒದ್ದಾಡುತ್ತದೆ. ಇಡೀ ಪ್ರಬಂಧ ಹಣ್ಣಿನ ಮೇಲೆ ಕೇಂದ್ರಿತವಾಗಿ, ಪ್ರಾಣಿ ಮೇಲಿನ ಕೇಂದ್ರಿತವಾಗಿ ಓದುಗನಿಗೆ ರಸಮಯ ಸನ್ನಿವೇಶವನ್ನು ನೀಡುತ್ತಾ ಹೋಗುತ್ತದೆ.

ಹಾಗೆಯೇ ಅವರ 'ಮಸಾಲದೋಸೆ' ಪ್ರಬಂಧ ಪು.ತಿ.ನರವರ ಪಾಕ ಪ್ರವೀಣತೆಗೆ ಹಿಡಿದ ಕೈಗನ್ನಡಿ. ಈ ಮಸಾಲೆ ದೋಸೆಯನ್ನು ಮಾಡುವ ವಿಧಾನವನ್ನು ಹೀಗೆ ವಿವರಿಸುತ್ತಾರೆ. ಇದು ಹೋಟೆಲಿನಲ್ಲಿ ಮಸಾಲೆದೋಸೆ ಮಾಡುವವನಿಗೂ ಇದರ ಇಷ್ಟು ಹದ ತಿಳಿದಿದೆಯೊ ಇಲ್ಲವೋ ಹೇಳಲಾಗುವುದಿಲ್ಲ. ಅಂತಹ ಮಸಾಲದೋಸೆಯನ್ನು ಪು.ತಿ.ನರು ಓದುಗನಿಗೆ ನೀಡುತ್ತಾರೆ.

---

[1] ಬೀದಿಯ ಬಸವ ಪು.41

[2] ಶ್ರೀಮತೆ ರಾಮನುಜಾಯ ನಮಃ ಪು.223

[3] ಔತಣ - ಬೀಳ್ಕೊಡಿಗೆ – 252

ನಿಜವಾಗಿ ಮಸಾಲೆದೋಸೆ ಕ್ರಾಂತಿಕಾರಕವಾದ ವಸ್ತುವೇನೋ ಹೌದು. ಅದು ಹಿಟ್ಟಿನ ಮುದ್ದೆಯಂತೆ ಸರಳವಾದ ಉಣಿಸಲ್ಲ. ಅದು ಬಹು ಸಂಕೀರ್ಣವಸ್ತು ಅನೇಕ ತಂತಿಗಳಿಂದ ಕೂಡಿ ಶ್ರುತಿಗೆ ಸಿದ್ಧವಾದ ಪಿಟೀಲಿನ ಮೇಲೆ ಕುಶಲವಾದಕನು ಆಡಿಸುವ ಹಾಗಾಗುತ್ತದೆ. ಪ್ರವೀಣನಾದ ವಲಲನು ಹದವರಿತು ನಿರ್ಮಿಸಿದ ಮಸಾಲೆದೋಸೆಯ ತುಣುಕು ರಸನೆಗೆ ಸೋಕಿದಾಗ, ಕಾಂತೆಯಪ್ರಣಯ ಕೋಪದಂತೆ ಅದು ಹೊರಗೆ ಕಟು, ಒಳಗೆ ಮೃದು, ಅಗ್ನಿಸಾಕ್ಷ್ಯವಾಗಿ ವರಿಸಿದ ಗೃಹಿಣಿಯೊಡನೆ ನಾವು ನಡೆಸುವ ಗಾರ್ಹಸ್ಥದಂತಲ್ಲ ಅದರೊಳಗಿನ ಮಸಾಲೆಯ ರುಚಿ.

ಅನ್ಯಸ್ತ್ರೀ ಕಟಾಕ್ಷದಂತಿದೆ ಈ ಪಲಾಂಡು ಮಾಧುರ್ಯ. ಇಂಗಿನ ಕಹಿ, ಮೆಂತ್ಯದ ಒಗಚು ಹಸಿಶುಂಠಿ ಹಸಿಮೆಣಸಿನಕಾಯಿ, ಮೆಣಸುಗಳ ವಿಶಿಷ್ಟವಾದ ಖಾರಗಳು ಪಲ್ಯದ ಕಾಯಿಗಳ ವಿವಿಧ ಮಾಧುರ್ಯ ಹಿಟ್ಟುಗಳ ಹುದುಗಿನ ಹಿತವಾದ ಹುಳಿ, ತುಪ್ಪದ ಕಂಪು, ಬೆಣ್ಣೆಯ ವಿಪುಲಾರ್ದ್ರತೆ ಈ ಸಮೃದ್ಧ ರಸಗಳನ್ನು ಹೊಂದಿಸಿ, ಸುತ್ತಲೂ ಕೆನ್ನಾಲಗೆಯನ್ನು ಚಾಚಿ ಕಾವಲಿಯ ಮೇಲಿರುವ ನಾಲಗೆಯ ಹರಿತವನ್ನು ಕೊಟ್ಟು ಒಂದು ಕ್ಷಣವೂ ಹಿಂಚು ಮುಂಚಿಲ್ಲದಂತೆ ಸಿದ್ಧಕ್ಷಣದಲ್ಲಿ ಎಲೆಗಿಳಿಸುವ ಕುಶಲ ಬಾಣಸಿಗನ ಕುಶಲ ಕೃತಿ ಈ ಮಸಾಲೆದೋಸೆ. ಇದಕ್ಕೆ ಯಾವ ರಸನಾವಂತ ಮರುಳಾಗಲೊಲ್ಲ?[1] ಈ ಮಸಾಲೆದೋಸೆಯ, ರಚನಾ ವಿನ್ಯಾಸದ ಕ್ರಮ ಪು.ತಿ.ನರವರಿಗೆ ಬಿಟ್ಟರೆ ಯಾವ ವಲಲನಿಗೂ ಇಂತಹ ಮಸಾಲೆಯನ್ನು ಸೃಷ್ಟಿಸುವ ಸಾಮಾರ್ಥ್ಯ ಸಾಧ್ಯವಾಗುವುದಿಲ್ಲ ಎಂಬುದು ಈ ಮಾತುಗಳಿಂದ ಸ್ಪಷ್ಟವಾಗುತ್ತದೆ. ಮಸಾಲೆಗೂ ಹೆಂಡತಿಗೂ ಇರುವಂತಹ ಸಾಮ್ಯ, ಗೃಹಸ್ಥನಿಗೂ ಪರಸ್ತ್ರೀಗೂ ಇರುವಂತಹ ಸಂಬಂಧಗಳನ್ನು ಸುಮಧುರವಾಗಿ ವರ್ಣಿಸುವ ಪರಿ ಅವರ ಬರವಣಿಗೆಯು, ಕವಿ ಕಲ್ಪನೆಯ ಶ್ರೇಷ್ಠತೆಯನ್ನು ತೋರಿಸುತ್ತದೆ.

ಪು.ತಿ.ನರ ಇಡೀ ಪ್ರಬಂಧಗಳನ್ನು ಗಮನಿಸಿದಾಗ ಸಂಸ್ಕೃತಿಯೇ ಅವರ ಸಾಹಿತ್ಯವನ್ನು ಉಳಿಸಿ, ಬೆಳೆಸಿ ಕಾಪಾಡಿರುವುದು ವ್ಯಕ್ತವಾಗುತ್ತದೆ. ಸಂಸ್ಕೃತಿಯ ಮುಖಾಂತರ ನಾವು ಕಾಣುವುದು ಒಂದು ವಿಶಿಷ್ಟವಾದ ದರ್ಶನ, ಆ ದರ್ಶನವೇ ವಿಶಿಷ್ಟಾದ್ವೈತದ ದರ್ಶನ ಎನ್ನಬಹುದು.

ಸುಮ್ಮನೆ ಬಾರದು ಭಾವೈಕ್ಯ
ಎಲ್ಲರ ಜತೆ ಬಾಳುವ ಸೌಖ್ಯ
ಮನ ಶುಚಿಗೊಳ್ಳದೆ ಬೆರೆಯದು ಮನದೊಳು
ಬೆಳೆಯದು ಹೃದ ಹೃದಯತೆ ಸಖ್ಯ[2]

ಪು.ತಿ.ನರವರ ತಮ್ಮ 'ಮೇಲುಕೋಟೆ' ಲೇಖನವನ್ನು ವೇದಾಂತ ದೇಶಿಕರು ತಿರುನಾರಾಯಣ ಸ್ವಾಮಿಗೆ ಸಲ್ಲಿಸಿರುವ ಪ್ರಾಥನೆಯ ಮೂಲಕ ಅಂತ್ಯಗೊಳಿಸುತ್ತಾರೆ. ಅದೇ ಸ್ತೋತ್ರವನ್ನು ಸ್ಮರಿಸುವ ಮುಖಾಂತರ ಯದುಗಿರಿಯ ಸಂಸ್ಕೃತಿ ಹಾಗೆ ಉಳಿಯಲೆಂದು ಪ್ರಾರ್ಥಿಸುತ್ತೇನೆ.

ನವ ನವ ಬಹು ಭೋಗಾಂ ನಾಥ ನಾರಾಯಣ ತ್ವಂ
ವಿರಚಯ ದುರಿತೋಘೈಸ್ತಾಮನಾಘ್ರಾತ ಗಂಧಾಂ
ಸಹಜ ಸುಲಭದಾಸ್ಯೈ ಸ್ಸದ್ಭಿರಭ್ಯರ್ಥನೀಯಾಂ
ಯತಿಪರಿವೃಢ ಹೃದ್ಯಾಂ ಯಾದವಾದ್ರೇಸ್ಸಮೃದ್ಧಿಂ

---

[1] ಮಸಾಲದೋಸೆ ಪು. 128

[2] ಭಾವೈಕ್ಯ ಗ್ರ: ಸ.ಕವನಗಳು ಪು.456

ನಾರಾಯಣನಾಥ, ಯದುಗಿರಿಗೆ ಸಮೃದ್ಧಿಯನ್ನು ಕಲ್ಪಿಸು; ಹೊಸ ಹೊಸ ಬಹು ಭೋಗಗಳುಳ್ಳದ್ದಾಗಿರುವುದನ್ನು, ಯಾವ ಕೇಡುಗಳೂ ತಟ್ಟದಂಥದನ್ನು, ಯತಿ ಪರಿವೃಢರ ಮನಸ್ಸು, ಸಂತೃಪ್ತವಾಗುವಂಥದನ್ನು, ತಮ್ಮ ಸ್ವಭಾವಕ್ಕೆ ಒಗ್ಗುವ ಕೈಂಕರ್ಯಗಳನ್ನು ಸರಾಗವಾಗಿ ನೆರವೇರಿಸಲು ಇದು ಯೋಗ್ಯ ಕ್ಷೇತ್ರವೆಂದು, ಒಳ್ಳೆಯವರೆ ನೆಲೆಸಿರಲಿ ಎಂದು ಬಯಸುವಂಥದನ್ನು - ಏ ಪ್ರಭುವೇ ಈ ಪರಿಯ ಸಮೃದ್ಧಿಯನ್ನು ಈ ದಿವ್ಯಕೇತ್ರಕ್ಕೆ ಕರುಣಿಸು.[1]

[1] ಮೇಲುಕೋಟೆ : ಸ.ಗ.ಸಂ ಪುಟ - 859

## ಸಮಾರೋಪ

'ಪು.ತಿ.ನ ಪ್ರಬಂಧಗಳಲ್ಲಿ ಶ್ರೀವೈಷ್ಣವ ತತ್ತ್ವ' ಎಂಬ ವಿಷಯವನ್ನು ಕೇಂದ್ರವಾಗಿರಿಸಿಕೊಂಡು ಈ ಸಂಪ್ರಬಂಧವನ್ನು ರಚಿಸಲಾಗಿದೆ. ಮೇಲುಕೋಟೆಯಂತಹ ಧಾರ್ಮಿಕ ಪರಿಸರದಲ್ಲಿ ಜನನ ತಾಳಿ, ಅಲ್ಲಿನ ಶ್ರೀವೈಷ್ಣವ ಪರಿಸರದಲ್ಲಿ ಬೆಳೆದ ಪು.ತಿ.ನರು ಅದನ್ನು ತಮ್ಮ ಉಸಿರಾಗಿಸಿ ಕೊಂಡಿದ್ದರು, ಕೆಲವೇ ವರ್ಷಗಳೂ ಮೇಲುಕೋಟೆಯಲ್ಲಿ ಕಳೆದು, ಮುಂದೆ ಮೈಸೂರು, ಬೆಂಗಳೂರುಗಳಂತಹ ನಗರದಲ್ಲಿ ಜೀವನ ನಡೆಸಿ, ಆಧುನಿಕತೆಯ ಸಂಸ್ಕೃತಿಯನ್ನು ಗೌರವಿಸಿದ್ದರೂ ತಮ್ಮ ಧರ್ಮದ ಆಚರಣೆಗಳನ್ನೂ ಚಾಚುತಪ್ಪದೇ ಆಚರಿಸುತ್ತಿದ್ದ ಪರಮಭಾಗವತ ಪು.ತಿ.ನ.

ತಮ್ಮ ಈ ಸಂಸ್ಕೃತಿಯ ತತ್ತ್ವವನ್ನೂ ಜೀವನದಲ್ಲಿ ಹೇಗೆ ಅಳವಡಿಸಿಕೊಂಡಿದ್ದರೂ, ಹಾಗೆಯೇ ತಮ್ಮ ಸಾಹಿತ್ಯದಲ್ಲಿಯೂ ಅಳವಡಿಸಿಕೊಂಡಿದ್ದರು. ಕಾವ್ಯ, ಮಹಾಕಾವ್ಯ, ಗೀತನಾಟಕ ಪ್ರಬಂಧಗಳಲೆಲ್ಲಾ ಈ ಸಂಸ್ಕೃತಿಯ ದರ್ಶನ ನಮಗೆ ಸಿಗುತ್ತಲೇ ಹೋಗುತ್ತದೆ. ಅದರಲ್ಲೂ ಮೇಲುಕೋಟೆ ಅವರಿಗೆ ಕಲ್ಲುಸಕ್ಕರೆಯಂತೆ. ಆ ಹೆಸರೇ ಸಾಕು ಅವರಲ್ಲಿ ಪರಂಪರೆಯ ಧಾರ್ಮಿಕತೆ ಎದ್ದು ಧಾರೆಯಾಗಿ ಹರಿಯುವಂತೆ ಮಾಡುತ್ತದೆ. ಅವರ ಸಾಕಷ್ಟು ಪ್ರಬಂಧಗಳ ವಸ್ತು ಶ್ರೀವೈಷ್ಣವತತ್ತ್ವ ಹಾಗೂ ಮೇಲುಕೋಟೆಯ ಪರಿಸರ.

ಇವರ ಪ್ರಬಂಧಗಳನ್ನೇ ಮೂಲವಾಗಿಟ್ಟು, ಇದರಲ್ಲಿ ಪ್ರಸ್ತಾಪವಾದ ಸಿದ್ಧಾಂತಗಳನ್ನು ಈ ಅಧ್ಯಯನದಲ್ಲಿ ನಡೆಸಲಾಗಿದೆ. ಆದರೆ ಕೆಲವು ಪ್ರಾತಿನಿಧಿಕ ಪ್ರಬಂಧಗಳ್ನು ಮತ್ರ ಸಂಕ್ಷಿಪ್ತವಾಗಿ ನೋಡಲು ಇಲ್ಲಿ ಸಾಧ್ಯವಾಗಿದೆ. ಹಾಗೆಯೇ ಇದರ ಕೆಲವು ಕವನಗಳನ್ನು ಗೀತನಾಟಕ ಹಾಗೂ ಶ್ರೀಹರಿಚರಿತೆಯ ಕೆಲವು ಅಂಶಗಳನ್ನು ಮಾತ್ರ ಸ್ಥೂಲವಾಗಿ ನೋಡಲಾಗಿದೆ. ಇದನ್ನು ಸಂಪೂರ್ಣವಾಗಿ ಒಳಮೂಡಿಸಲು ಮತ್ತೊಂದು ಅಧ್ಯಯನದ ಅವಶ್ಯಕತೆ ಎಂದೆನಿಸುತ್ತದೆ.

ಹಾಗೆಯೇ ಈ ಅಧ್ಯಯನಕ್ಕೆ ಇರುವ ಮಿತಿಯಿಂದ ಶ್ರೀವೈಷ್ಣವರ ಎಲ್ಲಾ ಆಚರಣೆಗಳನ್ನು ಇಲ್ಲಿ ಗಮನಿಸಲು ಸಾಧ್ಯವಾಗಿಲ್ಲ. ಇತ್ತೀಚೆಗೆ ಪ್ರಕಟವಾದ ಡಾ. ಅನಂತನರಸಿಂಹಚಾರ್ ಅವರ 'ಸಂಸ್ಕಾರಮಹೋದಧಿಃ' ಎಂಬ ಉದ್ಗ್ರಂಥ, ಈ ತರಹದ ಎಲ್ಲಾ ಆಚರಣೆಗಳ ತಾತ್ತ್ವಿಕ ಹಿನ್ನೆಲೆಯನ್ನೂ, ಸ್ವರೂಪವನ್ನು ವಿಸ್ತಾರವಾಗಿ ನಿರೂಪಿಸುತ್ತದೆ. ಅಂತಹ ವಿಸ್ತಾರವಾದ ಅಧ್ಯಯನದ ಅಗತ್ಯ ಪು.ತಿ.ನ ಅವರ ಬರವಣಿಗೆಯ ವಿಚಾರದಲ್ಲೂ ಅಗತ್ಯ ಇದೆ ಎಂಬುದು ನನ್ನ ಅನಿಸಿಕೆ.

## ಆಕರ ಗ್ರಂಥಗಳು


1. ಪು.ತಿ.ನ. ಅವರ ಸಮಗ್ರ ಗದ್ಯ ಸಂಪುಟ — ಸಂಃ ಡಾ. ಜಿ.ಎಸ್ ಶಿವರುದ್ರಪ್ಪ, ಡಾ. ಎಚ್.ಎಸ್. ವೆಂಕಟೇಶ್‌ಮೂರ್ತಿ, ಪ್ರಃ ಕನ್ನಡ ಪುಸ್ತಕ ಪ್ರಾಧಿಕಾರ, 2002
2. ಪು.ತಿ.ನ ನೂರರ ನೆನಪು — ಸಂಃ ಕಮಲಾ ನರಸಿಂಹ, ಪ್ರಃ ಸುಮುಖ 2005
3. ಪು.ತಿ.ನ ಸಮಗ್ರ ಕವನಗಳು — ಸಂಃ ಬಾ.ಕಿ.ನ, ಪ್ರಃ ಲಿಪಿ 1988
4. ಪು.ತಿ.ನ. ಸಮಗ್ರ ಗೇಯ ಕಾವ್ಯ ನಾಟಕಗಳು — ಸಂಃ ಪು.ತಿ.ನ ಟ್ರಸ್ಟ್, ಸತ್ಯಶ್ರೀ ಪ್ರಿಂಟರ್ಸ್ 1998
5. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ — ಡಾ. ಎಂ. ಚಿದಾನಂದಮೂರ್ತಿ, ಪ್ರಃ ಪ್ರಸಾರಂಗ ಮೈ.ವಿ.ವಿ, 1966
6. ಶ್ರೀ ರಾಮಾನುಜದರ್ಶನ — ಡಾ. ಎನ್.ಎಸ್. ಅನಂತರಂಗಾಚಾರ್ಯ, ಪ್ರಃ ಶ್ರಿರಾಮ ಪ್ರಿಂಟರ್ಸ್, 2005
7. ಶ್ರೀ ವೈಷ್ಣವ ಕೈಂಕರ್ಯ — ಜಿ.ಪಿ. ರಾಜರತ್ನಂ, ಪ್ರಃ ಹೆಬ್ಬಾರ ಶ್ರೀ ವೈಷ್ಣವ ಸಭಾ
8. ಶ್ರೀ ರಾಮಾನುಜಾಚಾರ್ಯ — ಆರ್. ಪಾರ್ಥಸಾರಥಿ 1969, ಪ್ರಃ ನ್ಯಾಷನಲ್ ಬುಕ್ ಟ್ರಸ್ಟ್, ಹೊಸದೆಹಲಿ
9. ತಿರುಪತಿ ತಿಮ್ಮಪ್ಪ — ಸಾ.ಕೃ. ರಾಮಚಂದ್ರರಾವ್, ಪ್ರಃ ನಿತ್ಯಾನಂದ ಪ್ರಿಂಟರ್ಸ್ 2006
10. ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ — ಬಿ.ಎಸ್. ಸಣ್ಣಯ್ಯ, ಕನ್ನಡ ಪುಸ್ತಕ ಪ್ರಾಧಿಕಾರ 2002
11. ವಿಶಿಷ್ಟಾದ್ವೈತ — ಡಾ. ಎನ್.ಎಸ್. ಅನಂತರಂಗಚಾರ್, ರಾಮಪ್ರಿಂಟರ್ಸ್ 2005
12. ಸಮಗ್ರ ಗದ್ಯ ಸಂಪುಟ -3 — ಜಿ.ಎಸ್. ಶಿವರುದ್ರಪ್ಪ 2007
13. ಕನ್ನಡದಲ್ಲಿ ಭಾವಗೀತೆ — ಡಾ. ಪ್ರಭುಶಂಕರ, ಪ್ರಃ ನಿವೇದಿತ, 1981
14. ನಿಲುವು — ಡಾ. ಎಚ್.ಎಸ್ ರಾಘವೇಂದ್ರರಾವ್, ಪ್ರಃ ಕನ್ನಡ ಸಂಘ, ಕ್ರೈಸ್ತ ಕಾಲೇಜು, 1989
15. ಸಂಸ್ಕಾರ ಮಹೋಧಿಃ — ಮಹಾಮಹೋಪಾಧ್ಯಾಯ ಡಾ.ಎ. ಅನಂತನರಸಿಂಹಚಾರ್, ಪ್ರಃ ಶ್ರೀರಾಮ ಪ್ರಿಂಟರ್ಸ್, 2008

